# ಮಾನಸಿ

ತಿಂಗಳ ಪತ್ರಿಕೆ

ಜನವರಿ : 2000

- ಕಬೀರನ ಕಾವ್ಯದಲ್ಲಿ ಮಹಿಳಾ ವಿಷಯ
- ಭದ್ರತೆಗೆ ಅಣ್ವಾಸ್ತ್ರಗಳು ಅನಿವಾರ್ಯವಲ್ಲ ?
- ಮಲಿನತೆಯ ಪರಿಕಲ್ಪನೆ
- ಗರಿಕೆ
- ಅಮ್ಮ

# ಮಾನಸ

ತಿಂಗಳ ಪತ್ರಿಕೆ

ಸಂಪುಟ : 15 ಸಂಚಿಕೆ : 1

ಜನವರಿ : 2000





ವಿಳಾಸ

"ಮಾನಸ" ತಿಂಗಳ ಪತ್ರಿಕೆ

ಪಂಚಾಯಿತಿ ರಸ್ತೆ

ಕಾಡುಗೋಡಿ ಪೋಸ್ಟ್

ಬೆಂಗಳೂರು - 560 067



ಸೂಚನೆ : ಬಿಡಿ ಪ್ರತಿ **3-00** ರೂ.

ವಾರ್ಷಿಕ ಚಂದಾ **40-00** ರೂ.

ಒಂದು ವಿಶೇಷ ಸಂಚಿಕೆಯೊಂದಿಗೆ

ಒಟ್ಟು ಹನ್ನೊಂದು ಸಂಚಿಕೆಗಳು


**ಈ ಸಂಚಿಕೆಯಲ್ಲಿ......**






ಸಂಪಾದಕರು, ಪ್ರಕಾಶಕರು ಹಾಗೂ ಮುದ್ರಕರು : ಮಾನವಿ ಮುದ್ರಣಾಲಯ

ಪಂಚಾಯಿತಿ ರಸ್ತೆ, ಕಾಡುಗೋಡಿ ಅಂಚೆ, ಬೆಂಗಳೂರು - ೫೬೦ ೦೬೭

# ಸಂಪಾದಕೀಯ



1999 ಮುಗಿದು ಹೊಸ ವರ್ಷ 2000 ಪ್ರಾರಂಭವಾಗಿದೆ. ಲಾಭಕೋರರು ಇದು ಹೊಸಯುಗವೆಂದು ದಂಧೆ ನಡೆಸಿದರು. ಮೈಮುರಿದು ದುಡಿದರೂ, ನಿತ್ಯದ ಅಗತ್ಯಗಳಿಗೆ ಪರಿದಾಡುವ ಜನರಿಗೆ ಹೊಸ ವರ್ಷ, ಹೊಸ ಯುಗ ಎಲ್ಲವೂ ಒಂದೇ. ಪರಿಹಾರವೆಂಬಂತೆ ಜನ ಪ್ರತಿ 'ನಿಧಿ'ಗಳು ರಾಜ್ಯವನ್ನು, ಹಳ್ಳಿ ಹಳ್ಳಿಯನ್ನು ಹೈಟೆಕ್ ಸಿಂಗಪುರ ಮಾಡಲು ಹೊರಟಿದ್ದಾರೆ. ಜೊತೆಯಲ್ಲಿ ಹಸಿವನ್ನ ಹಿಂಗಿಸಿಬಿಡುವ ತಂತ್ರಜ್ಞಾನವನ್ನು ಕಂಡುಹಿಡಿದವರಂತೂ ಸಮಸ್ಯೆಗೆ ಫುಲ್‌ಸ್ಟಾಪ್ ಇಡಬಹುದು.

ಕೇಂದ್ರ ಸರ್ಕಾರವು ಬಿಡುಗಡೆ ಮಾಡಿರುವ ಅಣು ಕರಡು ಜಾರಿಗೆ ಬಂದರೆ ಏಷ್ಯಾದಲ್ಲಿ ಶಸ್ತ್ರಾಸ್ತ್ರ ಪೈಪೋಟಿಗೆ ಕಾರಣವಾಗಿ, ದೇಶವನ್ನೆ ಅಣುವೆಂಬ ಭೀಕರ ಪ್ರಪಾತಕ್ಕೆ ತಳ್ಳುವುದರಲ್ಲಿ ಸಂಶಯವೇ ಇಲ್ಲ. ಕರಡು ತಿಳಿಸಿರುವ 'ಕನಿಷ್ಠ' ವ್ಯವಸ್ಥೆಗೆ ಆಗುವ ಅಂದಾಜು ವೆಚ್ಚ 70,000 ಕೋಟಿ! ಬಾಂಬುಗಳನ್ನು ಅನಿವಾರ್ಯವಾಗಿಸ ಹೊರಟಿರುವ ವೀರರು ದೇಶವನ್ನು ಆರ್ಥಿಕವಾಗಿ ದಿವಾಳಿ ಎಬ್ಬಿಸುವುದರಲ್ಲಿ ಅನುಮಾನವಿಲ್ಲ.

ಬಾಬರಿ ಮಸೀದಿಯನ್ನು ಖುದ್ದಾಗಿ ನಿಂತು ಕೆಡವಿದ, ಸತಿ ಪದ್ಧತಿಯನ್ನು ಸಮರ್ಥಿಸಿಕೊಳ್ಳುವ, ಮೀಸಲಾತಿ ಬಗ್ಗೆ ಉರಿದೇಳುವ ಬಾಂಬ್ ವೀರರೆ ಸಂವಿಧಾನದ ಪರಾಮರ್ಶೆಗೆ ಕೈ ಹಾಕಿದ್ದಾರೆ. ಈ ದೇಶದ ಮಹಿಳೆಯರ, ದಲಿತರ, ಅಲ್ಪಸಂಖ್ಯಾತರ ಬಗ್ಗೆ ಕಾಳಜಿ ಇರುವ ಮಾನವಂತ ಜನ, ಸಂವಿಧಾನವನ್ನು ಕೇಸರಿ ಪಡೆಗಳ ಕೈಗೆ ನೀಡದಂತೆ ಎಚ್ಚರ ವಹಿಸುವ ಅಗತ್ಯವಿದೆ. ದೇಶದ ಸದ್ಯದ ಪರಿಸ್ಥಿತಿಯಲ್ಲಿ ಮತಾಂಧ, ಜಾತೀಯತೆಯ ಶಕ್ತಿಯನ್ನು ಎದುರಿಸುವುದು ನಮ್ಮೆಲ್ಲರ ತುರ್ತು. ಎದುರಿಸುವ ಪ್ರಕ್ರಿಯೆಯಲ್ಲಿ ಪ್ರತಿ ಹೆಜ್ಜೆಯಲ್ಲೂ ಸೂಕ್ಷ್ಮವಾಗಿ ವ್ಯವಹರಿಸುವ ಮತೀಯತೆ, ಜಾತೀಯತೆಯನ್ನು ಎದುರಿಸುವ, ಜೊತೆ ಜೊತೆಯಲ್ಲೆ ನಮ್ಮೊಳಗೆ ಕೆರೆಯುತ್ತಾ ಹೋದಂತೆ ಗೋಚರಿಸುವ ಕೇಸರಿ ರಕ್ತವನ್ನು ಪ್ರಶ್ನಿಸಿಕೊಳ್ಳುವ ಅಗತ್ಯವಿದೆ. ಹಾಗಾದಾಗ ಮಾತ್ರ ಆರೋಗ್ಯವಂತ ಸಮ ಸಮಾಜದ ಕನಸು ನಿಜವಾಗಬಹುದು.

**ಹೊಸ ವರ್ಷ ಎಲ್ಲರಿಗೂ ಆರೋಗ್ಯ, ನೆಮ್ಮದಿ ನೀಡಲೆಂದು ಹಾರೈಸುತ್ತೇವೆ.**

# ಕಬೀರನ ಕಾವ್ಯದಲ್ಲಿ ಮಹಿಳಾ ವಿಷಯ

*ಮಮತಾ ಜಿ. ಸಾಗರ್*

ಪುರುಷ ಪ್ರಧಾನ ಊಳಿಗಮಾನ್ಯ ಸಮಾಜದಲ್ಲಿ ಮಹಿಳೆಯ ಇರುವಿಕೆಯನ್ನು ನಿರಾಕರಣೆಯನ್ನು ಪ್ರಶ್ನಿಸಿ, ಅವಳನ್ನು ಒಳಗೊಳ್ಳುವಂತೆ ವಾದಿಸುವುದು ಸರಳವಾದ ವಿಚಾರವೇನೂ ಅಲ್ಲ. ಇದು ಹಲವೊಮ್ಮೆ ಅಸಮ್ಮತಿಯ ರೂಪ ಕೂಡ ಪಡೆಯುವುದಿಲ್ಲ. ಅಧಿಕಾರಹೀನ ಹಾಗೂ ಅಂಚಿಗೆ ದೂಡಲ್ಪಟ್ಟವನ ಮೇಲೆ ಪ್ರಭುತ್ವದ ಹತೋಟಿ ಹಾಗೂ ಅವರ ಬಗ್ಗೆ ತಾರತಮ್ಯ ಭಾವಗಳು ಈ ಸಮಾಜದಲ್ಲಿ ಬೆಳೆದಿವೆ. ಕೆಲವೊಂದು ಜನಸಮುದಾಯಗಳ ಆಗುಹೋಗುಗಳನ್ನೇ ಹೊಲಿಸ್ಟಿಕ್ ಮಾದರಿ ಎಂದು ಪರಿಗಣಿಸ ಲಾಗಿದೆ. ಆದರೆ ಈ ಮಾದರಿಯು ಸಕಲ ಸೌಲಭ್ಯಗಳಿಂದ ವಂಚಿತರಾದವರನ್ನು ಮತ್ತು ದೈಹಿಕವಾಗಿ ಹಾಗೂ ಆರ್ಥಿಕವಾಗಿ ದುರ್ಬಲರಾಗಿರುವವರನ್ನು ಅಲ್ಲದೇ ಪ್ರಭುತ್ವದ ಒತ್ತಾಸೆ ಯಿಲ್ಲದವರನ್ನು ಪರಿಗಣಿಸುವುದೇ ಇಲ್ಲ; ಮಹಿಳೆಯಿಂದ ಸಮಾಜಕ್ಕೆ ದೊರಕುವ ಯಾವುದೇ ರೀತಿಯ ಆರ್ಥಿಕ ಕೊಡುಗೆಯನ್ನು, ಆಕೆಯ ಪುರುಷ ಜೊತೆಗಾರನ ಕೊಡುಗೆಯ ಒಂದು ವಿಸ್ತರಣೆ ಎಂದಷ್ಟೇ ನೋಡುತ್ತದೆ; ಭೌತಿಕ ಹಾಗೂ ಆಧ್ಯಾತ್ಮಿಕ ಕ್ಷೇತ್ರಗಳನ್ನು ಪ್ರವೇಶಿಸಲು ಮಹಿಳೆಯ ಮೇಲೆ ಹೇರಲಾಗಿರುವ ನಿಷೇಧ ಹಾಗೂ ಇದು ಸ್ವಾಭಾವಿಕವೆಂಬ ನಂಬಿಕೆಯನ್ನು ಮಹಿಳೆಯರಲ್ಲೇ ಮೂಡಿಸಿರುವುದು ಸಮಾಜಕ್ಕೆ ಒಪ್ಪಿಗೆಯಾಗಿರುವ ಮಾದರಿಯಾಗಿದೆ.

ಮಿಕೇಲೆ ಬ್ಯಾರೆಟ್ ಅವರ ಪ್ರಕಾರ, ಲಿಂಗಾಧಾರಿತ ವ್ಯವಸ್ಥೆಗೆ ಸಿದ್ಧಾಂತವು ಅತಿಮುಖ್ಯವಾದರೂ, ಇದನ್ನು ಒಟ್ಟಾರೆ ಸಮಾಜದ ಭಾವವೆಂದು ಅರ್ಥಮಾಡಿಕೊಳ್ಳಬೇಕೇ ವಿನಃ ಇದೊಂದು ಸ್ವಾಯತ್ತ ರೂಢಿ, ಅಥವಾ ವ್ಯಾಖ್ಯಾನ ಎಂದೇನೂ ಅಲ್ಲ. ಸಮಾಜವು ಹೆಣ್ಣು-ಗಂಡಿಗೆ ವಿಭಿನ್ನ ಕಾಲ್ಪನಿಕ ಪರಿಧಿಯನ್ನು ರೂಪಿಸಿ, ಅವರ ಸ್ಥಾನ, ನಿರ್ದಿಷ್ಟ ವರ್ತನೆ ಹಾಗೂ ಭೌಗೋಳಿಕ ಗಡಿಗಳನ್ನು ರೂಪಿಸಿ, ಅವರು ಕಾರ್ಯನಿರ್ವಹಿಸುವಂತೆ ಅವರನ್ನು ಬಂಧಿಸಿದೆ.

ಕೌಟುಂಬೀಕರಣ ಸಿದ್ಧಾಂತವು ಗಂಡಿಗೆ ಲಿಂಗಾಧಾರಿತ ಗಡಿಯ ಮೇಲ್ವಿಚಾರಣೆ ಹಾಗೂ ಪಾತ್ರನಿರ್ವಹಣೆಗೆ ನೀಡಿದ್ದಲ್ಲದೆ ಅವನ ಪ್ರಭುತ್ವ ಸೃಷ್ಟಿಗೆ ಅದು ಒತ್ತಾಸೆಯಾಗಿದೆ.

ಮೇಲಿನ ವಿಚಾರಗಳನ್ನು ಗಮನದಲ್ಲಿಟ್ಟುಕೊಂಡೇ ಮಹಿಳೆಯ ಬಗೆಗಿನ ಕಬೀರನ ಕಾವ್ಯವನ್ನು ವ್ಯಾಖ್ಯಾನಿಸಲು ಇಲ್ಲಿ ಪ್ರಯತ್ನಿಸಲಾಗಿದೆ. ಮಹಿಳೆಯರನ್ನು ಕುರಿತಂತೆ ಕಬೀರನ ದೃಷ್ಟಿಕೋನವು ಆ ಕಾಲದ ಪ್ರಭುತ್ವದ ಮತ್ತು ಸಮಾಜದ ಸಿದ್ಧಾಂತವನ್ನು ಹೇಗೆ ಪ್ರತಿಫಲಿಸುತ್ತದೆ; ಆಕಾಲದ ಪ್ರಭುತ್ವದ ಮತ್ತು ಸಮಾಜದ ಸಿದ್ಧಾಂತವು ಕಬೀರನ ಮೇಲೆ ಹೇಗೆ ಪ್ರತಿಫಲನಗೊಳ್ಳುತ್ತದೆ ಎಂಬುದನ್ನೂ ಇಲ್ಲಿ ಪರಿಶೀಲಿಸಲಾಗಿದೆ.

ಭಕ್ತಿಪಂಥದ ಸಮಾಜ ಸುಧಾರಕ ಹಾಗೂ ಕವಿ ಕಬೀರ ೧೫ನೇ ಶತಮಾನದವ. ಅದು ಶಕ್ತಿಶಾಲಿಗಳಾಗಿದ್ದ ಟರ್ಕಿಗಳನ್ನು ಎದುರಿಸಲು ಲೋದಿಗಳು ಅಫಘಾನಿಗಳನ್ನು ಆಹ್ವಾನಿಸಿದ್ದ ಕಾಲ. ಆಗ ಲೋದಿಗಳ ಮುಖ್ಯ ವಿರೋಧಿಗಳಾದ ಟರ್ಕಿಗಳು ಜಾನಪುರದಲ್ಲಿ ಆಡಳಿತ ನಡೆಸುತ್ತಿದ್ದರು. ಜಾನಪುರ ಆಗ ಮುಖ್ಯವಾದ ಸಾಂಸ್ಕೃತಿಕ ಮತ್ತು ರಾಜಕೀಯ ಕೇಂದ್ರವಾಗಿತ್ತು. ಸಾವಿತ್ರಿ ಚಂದ್ರ ಶೋಭಾ ವಿಶ್ಲೇಷಿಸುವಂತೆ, ಆಗ ಉದಾರವಾದದ ಹೊಸ ಸಾಂಸ್ಕೃತಿಕ ಪರಂಪರೆಗಾಗಿ ಹಾಗೂ ಸ್ಥಾಪಿತ ವ್ಯವಸ್ಥೆಯ ವಿರುದ್ಧ ಕಾಶಿ-ಜಾನಪುರಗಳನ್ನು ಕೇಂದ್ರಗಳನ್ನಾಗಿ ಹೊಂದಿ, ಸುತ್ತಮುತ್ತಲ ಪ್ರದೇಶಗಳಲ್ಲಿ ದನಿಗಳು ಕೇಳಿಸಲಾರಂಭಿಸಿದ್ದವು. "ಭಾರತದಲ್ಲಿ ಇಸ್ಲಾಂ ಧರ್ಮ ಪ್ರವೇಶವಾದ ಬಳಿಕ ಭಾರತದ ರಾಜಕೀಯ, ಧಾರ್ಮಿಕ ಮತ್ತು ಸಾಂಸ್ಕೃತಿಕ ಬದುಕಿನಲ್ಲಿ ಮಹತ್ತರ ಪರಿಣಾಮ ಉಂಟಾಯಿತು" ಈ ಕಾಲದಲ್ಲಿ ಅನೇಕ ಸಾಮಾಜಿಕ ಗುಂಪುಗಳು ಸಾಮಾಜಿಕ ಶ್ರೇಣಿಯಲ್ಲಿ ವಿವಿಧ ದಿಕ್ಕುಗಳತ್ತ ಚಲಿಸಿದವು. ಆ ಮೊದಲು ಶ್ರೇಣಿಯಲ್ಲಿ ಕೆಳಸ್ತರದಲ್ಲಿದ್ದ ಗುಂಪುಗಳು ಅಭಿವೃದ್ಧಿ ಕ್ಷೇತ್ರಗಳಲ್ಲಿ ಹಾಗೂ ರಾಜ್ಯದ ಆರ್ಥಿಕ ಸ್ಥಿತಿಯನ್ನು ಉತ್ತಮಗೊಳಿಸುವ ಕ್ಷೇತ್ರಗಳಲ್ಲಿ ಪಾಲ್ಗೊಂಡು ಆಧುನೀಕರಣದ ಭಾಗವಾದವು. ಈ ಗುಂಪುಗಳು ತಮ್ಮ ಮಹತ್ವವನ್ನು ಮನಗಾಣಲು ಈ ಪ್ರಕ್ರಿಯೆಯೂ ಕಾರಣವಾಗಿರಲು ಸಾಕು. ದೇವರ ಕಣ್ಣಲ್ಲಿ ಎಲ್ಲರೂ ಸಮಾನರು ಎಂಬ ಇಸ್ಲಾಂನ ಸಾಮಾಜಿಕ ತತ್ವವು, ಬ್ರಾಹ್ಮವಾದಿ ಸಮಾಜ ವ್ಯವಸ್ಥೆಯ ಯಜಮಾನ ಸಂಸ್ಕೃತಿಯಲ್ಲಿ ಸ್ಥಾನದಿಂದ ವಂಚಿತರಾಗಿದ್ದ ಗುಂಪುಗಳಿಗೆ ಒಂದು ಸ್ಥಾನವನ್ನು ಒದಗಿಸಿಕೊಟ್ಟಿತು. ಎರಡು ಮುಖ್ಯ ಶಕ್ತಿಗಳಾಗಿದ್ದ ಹಿಂದೂ ಮತ್ತು ಮುಸಲ್ಮಾನ ಗುಂಪುಗಳ ನಡುವಣ ಈ ವಿಧದ ಘರ್ಷಣೆ ಮತ್ತು ಕೊಡಕೊಳ್ಳುವಿಕೆಯು ಹೊಸ ಆಲೋಚನೆಯೊಂದರ ಹಲವು ರೂಪುಗಳನ್ನು ಹುಟ್ಟು ಹಾಕಿತು.

ಸಮಾಜದಿಂದ ಪರಿತ್ಯಕ್ತರಾಗಿದ್ದ ಹಾಗೂ ಸಾಮಾಜಿಕ ಮನ್ನಣೆಗಾಗಿ ಹಾತೊರೆಯುತ್ತಿದ್ದ ಕಬೀರರಂಥವರಿಗೂ ಈ

ಕಾಲದಲ್ಲಿ ಸ್ಥಾನ ಸಿಕ್ಕಿತು. ತಮ್ಮ ಮೇಲೆ ಅಧಿಕಾರ ಚಲಾಯಿಸಿದ್ದ ಬ್ರಾಹ್ಮಣಶಾಹಿಯ ಬಗ್ಗೆ ವಿಮರ್ಶೆ ಮಾಡುವ ದನಿಯನ್ನೂ ಅಂಥವರು ಪಡೆದುಕೊಂಡರು. ಇರ್ಫಾನ್ ಹಬೀಬ್ ಹೇಳುವಂತೆ "ಜಾತಿ ನಿರ್ಬಂಧಗಳ ಬಗ್ಗೆ ಕುಲವೃತ್ತಿ ಅವಲಂಬಿತರು ಹೊಂದಿದ್ದ ಮೊದಲ ತಪ್ಪು ತಿಳುವಳಿಕೆಯನ್ನು ಹಾಗೂ ಸಾಮಾಜಿಕ ಶ್ರೇಣೀಕರಣದಲ್ಲಿ ತನ್ನ ಕೆಳಸ್ಥಾನವನ್ನು ಕಬೀರರ ದೋಹೆಗಳು ಸ್ಪಷ್ಟಪಡಿಸುತ್ತವೆ". ಕೆಲವೊಂದು ಮೂಲಭೂತ ಬದಲಾವಣೆಗಳು ನಡೆದು, ಭಕ್ತಿ ಚಳವಳಿಯು ಸಮಾಜ ಸುಧಾರಣಾ ಚಳವಳಿಯಾಗಿ ಪರಿವರ್ತನೆಗೊಂಡಿತು. ತತ್ಪರಿಣಾಮವಾಗಿ, ಚಲನರಹಿತ ಸಮಾಜದ ಸಾಮಾಜಿಕ ಸ್ವರೂಪ ಮೈದಾಳಿತು.

ರಾಜಕೀಯ ಮತ್ತು ಆರ್ಥಿಕ ಕ್ಷೇತ್ರದಲ್ಲಿ ಪಾಳೆಯಶಾಹಿ ಶೋಷಣೆ ತಾಂಡವವಾಡುತ್ತಿದ್ದರೆ, ಸಾಮಾಜಿಕ ಕ್ಷೇತ್ರದಲ್ಲಿ ಬ್ರಾಹ್ಮಣಶಾಹಿ ಶೋಷಣೆ ತಾಂಡವವಾಡುತ್ತಿತ್ತು. ರೇಖಾಪಾಂಡೆ ವಿವರಿಸುವಂತೆ "ಯಥಾಸ್ಥಿತಿವಾದವನ್ನು ಕಾಪಾಡಿಕೊಳ್ಳಲೆಂದು ಬ್ರಾಹ್ಮಣರು ಸಂಕೀರ್ಣ ಪದ್ಧತಿ-ಆಚರಣೆಗಳನ್ನು ಕೈಗೊಂಡರು; ನಾಲ್ಕು ವರ್ಣಗಳೊಳಗೆ ಸೇರಿಸಲ್ಪಡದವರನ್ನು ಚಂಡಾಲರೆಂದು, ಬಹಿಷ್ಕೃತರು ಎಂದು ಗುರುತಿಸಿಡಲಾಯಿತು"ಇಂಥ ಬ್ರಾಹ್ಮಣರನ್ನು ಕುರಿತು ಕಬೀರ "ವೇದಪಠಣದಲ್ಲಿ ನಿರತರಾದ ಬ್ರಹ್ಮಣರು ಆತ್ಮವನ್ನು ಗುರುತಿಸುವುದನ್ನು ಮರೆತರು; ಸ್ನಾನ, ಸಂಧ್ಯಾ, ಪೂಜೆ, ತರ್ಪಣ, ಜಪ, ಹೋಮ ಮುಂತಾದ ವಿಧಿಗಳಲ್ಲಿ ಅವರು ಮುಳುಗಿ ಹೋದರು; ರಾಮ ಎಲ್ಲರಲ್ಲಿದ್ದಾನೆ, ಆದರೂ ಇನ್ನೊಬ್ಬರ ಸ್ಪರ್ಶವಾದ ಕೂಡಲೇ ಅವರು ಸ್ನಾನ ಮಾಡಿ, ಮಡಿಯಾಗುತ್ತಾರೆ; ಈಗ ಇಬ್ಬರಲ್ಲಿ ಯಾರು ಕೀಳು ಎಂದು ಅವರವರೇ ನಿರ್ಣಯಿಸಬೇಕು. ಬ್ರಾಹ್ಮಣರು ಇಂಥ ಹಮ್ಮಿನಿಂದ ಯಾವ ಪ್ರಗತಿಯತ್ತಲೂ ನಡೆಯಲಾರರು; ಏಕೆಂದರೆ ಇಂಥ ಹಮ್ಮು ಖುದ್ದು ದೇವರಿಗೇ ವಿರೋಧವಾಗಿದೆ."

ಭಕ್ತಿಯ ಬಹಿರಂಗ ಮಾರ್ಗಗಳನ್ನು ತಿರಸ್ಕರಿಸುತ್ತಾ ಕಬೀರ ತನ್ನ ದೋಹೆಯೊಂದರಲ್ಲಿ

ಜನ ತಿಳಿದಿರುವ ದೇವರು ಯಾರೆಂಬುದನ್ನು ನಾನರಿಯೆ
ನಸುಕಿನಲ್ಲಿ ಗಟ್ಟಿ ಗಂಟಲಲ್ಲಿ ದೇವರನ್ನು ಕೂಗುತ್ತಾರೆ
ದೇವರೇನು ಕಿವುಡನೇ? ಖಂಡಿತ ಇರದು
ನಡೆದಾಡುವ ಪುಟ್ಟ ಕೀಟವೊಂದರ ಹೆಜ್ಜೆ ಸದ್ದನ್ನೂ ಕೇಳಬಲ್ಲ ಅವನು
ಮಣಿಸರವನ್ನು ತಿರುಗಿಸುತ್ತಲೇ ಇರಿ, ಹಣೆ ಮೇಲೆ ಚಿತ್ರಗಳನ್ನು ಬರೆದುಕೊಳ್ಳುತ್ತಲೇ ಇರಿ
ತಲೆಗೂದಲನ್ನು ಬೋಳಿಸಿಕೊಳ್ಳುತ್ತಲೇ ಇರಿ ಅಥವಾ ಬೆಳೆಸುತ್ತಲೇ ಇರಿ
ಆದರೆ ನಿಮ್ಮೊಳಗೆ -ಅಂತರ್ಯದೊಳಗೆ - ಮದ್ದು ತುಂಬಿದ ಬಂದೂಕೊಂದಿರುವಾಗ
ನಿಮಗೆ ದೇವರ ಅನುಭೂತಿಯಾಗುವುದಾದರೂ ಹೇಗೆ?

*ಎಂದು ಮಾರ್ಮಿಕವಾಗಿ ಹೇಳಿದ್ದಾನೆ.*

ಹಿಂದೂಗಳು ಮತ್ತು ಮುಸಲ್ಮಾನರು ಇಬ್ಬರೂ ಮಾಡುವ ಧಾರ್ಮಿಕ ವಿಧಿ-ವಿಧಾನಗಳನ್ನು ಕಬೀರ ಟೀಕಿಸಿದ್ದಾನೆ. "ದೇವರು ಮಂದಿರದಲ್ಲೂ ಇಲ್ಲ, ಮಸೀದಿಯಲ್ಲೂ ಇಲ್ಲ; ಕಾಬಾದಲ್ಲೂ ಇಲ್ಲ, ಕೈಲಾಸದಲ್ಲೂ ಇಲ್ಲ ಎಂದು ಹೇಳಿದ್ದಾನೆ. ಕಬೀರನು ಪೂಜಾಕರ್ಮಾದಿಗಳ ಪರವೂ ಇಲ್ಲ, ಶ್ರಾದ್ಧಕರ್ಮಾದಿಗಳ ಪರವೂ ಇಲ್ಲ; ಯೋಗದ ಮೊರೆ ಹೊಕ್ಕವನೂ ಅವನಲ್ಲ, ಸಂಸಾರತ್ಯಾಗದ ಮಾತಾಡಿದವನೂ ಅವನಲ್ಲ. ನಾವು ನೈಜ ಸತ್ಯಶೋಧಕರೇ ಆಗಿದ್ದಲ್ಲಿ, ದೇವರು ನಮ್ಮ ಬಳಿಯೇ ಗೋಚರಿಸುತ್ತಾನೆ, ಏಕೆಂದರೆ ಅವನು ನಮ್ಮ ಉಸಿರಿನ ಉಸಿರಾಗಿದ್ದಾನೆ" ಎಂದಿದ್ದಾನೆ ಕಬೀರ. ಸಾವಿತ್ರಿ ಚಂದ್ರ ಶೋಭಾ ಪ್ರಕಾರ "ಕಬೀರನ ಸಾಮಾಜಿಕ ದರ್ಶನದ ಕೇಂದ್ರಬಿಂದು ಎಂದರೆ ಸಮಾನತೆ ಮತ್ತು ಮಾನವಕುಲದ ಏಕತೆ. ಧರ್ಮ, ಜಾತಿ, ಪಂಗಡ, ಅಥವಾ ಕುಟುಂಬಗಳ ಹಿನ್ನೆಲೆಯಲ್ಲಿ ಮಾನವಕುಲದ ವಿಭಜನೆಯನ್ನು ಕಬೀರ ಖಂಡಿಸಿದ" ಕಬೀರನ ಪ್ರಕಾರ ಪ್ರೀತಿಯೇ ಅಂತಿಮ ವಾದುದು. ಮಸೀದಿಗಳು, ಸ್ಮಾರಕಗಳು ಪುರೋಹಿತರು, ಮುಲ್ಲಾಗಳು, ಶಾಸ್ತ್ರಗಳು ಕುರ್‌ಆನ್ ಇವುಗಳಿಂದ ಕಲಿಯುವುದೇನು ಇಲ್ಲ. ಇವೆಲ್ಲಾ ಮೇಲ್‌ಸ್ತರದ ಸಂಗತಿಗಳು. ಪ್ರೀತಿ ಇವೆಲ್ಲಕ್ಕಿಂತಲೂ ಮಿಗಿಲಾದುದು, ಯಾವುದೇ ವಿದಿಗಿಂತಲೂ ಪ್ರೀತಿ ಹೆಚ್ಚಿನದು. ಸಮಾನತೆಗೆ ಮತ್ತು ಮಾನವ ಏಕತೆಗೆ ಅಡ್ಡಿಯಾಗುವ ಯಾವುದೂ ಕ್ಷುಲ್ಲಕವಾದವುಗಳಲ್ಲಿ ಕ್ಷುಲ್ಲಕವಾದುದು.

ದೇವರು ಶರೀರದಲ್ಲಿ ಶಬ್ದದ ರೂಪದಲ್ಲಿರುವ ಎಂದು ತಿಳಿಸುತ್ತಾರೆ ಕಬೀರ. ಮಾಯೆಯನ್ನು ಗೆದ್ದವನು ಶಬ್ದವನ್ನು ಪಡೆಯಲು ಸಾಧ್ಯ. ನನ್ನ ಶಬ್ದವು ನನಗೆ ಕಲ್ಪವೃಕ್ಷದಂತೆ. ನಾನು ಬಯಸಿದ್ದನ್ನು ಅದು ನನಗೆ ನೀಡುತ್ತದೆ. ಹೆಣ್ಣನ್ನು ಇಲ್ಲಿ ಮಾಯೆ ಎಂದು ದಾಖಲಿಸಲಾಗಿದ್ದು, ಅವಳು ಮನುಷ್ಯ ಮತ್ತು ದೇವರ ನಡುವೆ ಇರುವ ಒಂದು ಅಡ್ಡಿ ಎಂದು ಬಹುಶಃ ಇಲ್ಲಿ ಗುರುತಿಸಲಾಗಿದ್ದು ಹಾಗಾಗೇ ಕಬೀರನ ದೋಹೆಗಳಲ್ಲಿ ಮಹಿಳೆಗೊಂದು ಪ್ರತ್ಯೇಕ ಅಸ್ತಿತ್ವ ಇರುವುದನ್ನೇ ಕಾಣಲಾಗುವುದಿಲ್ಲ.

**ಕಬೀರ ಸೃಷ್ಟಿಸಿದ ಸ್ತ್ರೀ ಪಾತ್ರಗಳು**

ವೈಚಾರಿಕ ನೆಲಗಟ್ಟನ್ನು ಹೊಂದಿದ ಕಬೀರ, ತನ್ನ ಸಾಹಿತ್ಯ ಸೃಷ್ಟಿಯಲ್ಲಿ ಸರ್ವ ದುರ್ಗುಣಗಳನ್ನು ಬಣ್ಣಿಸಲು ಹೆಣ್ಣನ್ನು

ಪ್ರತೀಕವಾಗಿಸಿದ್ದೊಂದು ಆಶ್ಚರ್ಯವೇ ಸೈ. ಪಾಳೆಯಶಾಹಿ ಶೋಷಣೆ ಹಾಗೂ ಬ್ರಾಹ್ಮಣಶಾಹಿ ಶೋಷಣೆಗಳಲ್ಲಿ ಹೆಣ್ಣಿನ ಶೋಷಣೆಯೊಂದು ಒಪ್ಪಿತ ಅಂಶವಾಗಿದೆ. ತನ್ನ ಸಾಹಿತ್ಯದ ಮೂಲಕ ಭಿನ್ನ ದನಿ ಎತ್ತಿ, ಶೋಷಿತರ ಮತ್ತು ಬಹಿಷ್ಕೃತರ ಪರವಾಗಿ ನಿಂತ ಕಬೀರ ಕೂಡ ಹೆಣ್ಣಿನ ಶೋಷಣೆಯನ್ನು ಒಪ್ಪಿತ ಅಂಶವಾಗಿಯೇ ಸ್ವೀಕರಿಸಿದ. ಎಲ್ಲ ದುರ್ಗುಣಗಳಿಗೆ ಮತ್ತು ಪಾಪಗಳಿಗೆ ಹೆಣ್ಣನ್ನು ಹೊಣೆಯಾಗಿಸಲಾಯಿತು. ಕಬೀರ ಕೈಗೊಂಡ ಸಮಾಜ ಸುಧಾರಣಾ ಪ್ರಯತ್ನಗಳೂ ಶೋಷಿತ ಹೆಣ್ಣನ್ನು ಒಳಗೊಳ್ಳಲಿಲ್ಲ. ಈ ಪ್ರಯತ್ನಗಳಿಗೂ ಕೂಡ ಹೆಣ್ಣು ಪರಕೀಯಳಾಗಿ, ಬಹಿಷ್ಕೃತರಲ್ಲೇ ಬಹಿಷ್ಕೃತವಾಗುಳಿದಳು. ಜನ್ಮದಿಂದ ಶೂದ್ರಳಾದ 'ಹೆಣ್ಣಿನ ಕೈಯಿಂದ ಊಟವನ್ನು ಸ್ವೀಕರಿಸುವ ಬ್ರಾಹ್ಮಣನೇ, ಇನ್ನುಳಿದ ಶೂದ್ರರಿಂದ ಏಕೆ ಊಟವನ್ನು ಸ್ವೀಕರಿಸುವುದಿಲ್ಲ? ಎಂದು ಕಬೀರ ಬ್ರಾಹ್ಮಣರನ್ನು ತರಾಟೆಗೆ ತೆಗೆದುಕೊಂಡಿದ್ದಾನೆ.

ಸಮಾಜದಲ್ಲಿ ಹೆಣ್ಣು ಹೇಗೆ ನಡೆದುಕೊಳ್ಳಬೇಕೆಂಬ ಬಗ್ಗೆ ಕೆಲವೊಂದು ರೂಢಿಗತ ನಿಯಮಗಳನ್ನು ಕಬೀರನ ದೋಹೆಗಳಲ್ಲಿ ಕಾಣಬಹುದು. ಆಗಿನ ಸಮಾಜ ವ್ಯವಸ್ಥೆಯಲ್ಲಿ ಹೆಣ್ಣಿಗೆ ನೀಡಲಾಗಿದ್ದ ಸ್ಥಾನ ಮತ್ತು ಮಿತಿಗಳನ್ನು ಕಬೀರ ಪೂರ್ತಿಯಾಗಿ ಒಪ್ಪಿಕೊಂಡಿದ್ದ ಎಂಬುದನ್ನೂ ಕಾಣಬಹುದು. ಹೆಣ್ಣನ್ನು ಒಳ್ಳೆಯವಳು ಮತ್ತು ಕೆಟ್ಟವಳು ಎಂದು ವರ್ಗೀಕರಿಸಲಾಗಿತ್ತು. ಗಂಡ, ಮತ್ತು ಗಂಡನ, ತಂದೆ-ತಾಯಿ, ಸೋದರ-ಸೋದರಿಯರು ಮುಂತಾದವರೊಂದಿಗೆ ವಿಧೇಯರಾಗಿದ್ದ ಹೆಂಗಸರು ಒಳ್ಳೆಯವರೆಂದೂ ಕಬೀರ ನಂಬಿದ್ದ. ಪಾತಿವ್ರತ್ಯವನ್ನು ಕಬೀರ ಬಹು ಬಲವಾಗಿ ಸಮರ್ಥಿಸಿಕೊಂಡಿದ್ದಾನೆ. ಅವನು ಹೇಳುವಂತೆ, ಹೆಣ್ಣು ಎಷ್ಟೇ ಕುರೂಪಿಯಾಗಿದ್ದರೂ, ಕೊಳಕಳಾಗಿದ್ದರೂ ಕಪ್ಪಾಗಿದ್ದರೂ ಅವಳು ಪತಿವ್ರತೆಯಾಗಿದ್ದಲ್ಲಿ ಯಾವ ಅಪಕೀರ್ತಿಯೂ ಅವಳನ್ನು ಬಾಧಿಸುವುದಿಲ್ಲ. ಆಗ ಹೆಂಗಸರಿಗೆ ಸಾರ್ವಜನಿಕ ಜೀವನದಲ್ಲಿ ಅವಕಾಶವಿರಲಿಲ್ಲ; ಅವರು ಹೊಸ್ತಿಲೊಳಗೆ-ಪರ್ದಾದೊಳಗೆ-ಇರಬೇಕಾಗಿತ್ತು. ಸೇವಾನಿರತೆ ಪತ್ನಿಯು ತನ್ನ ಗಂಡನ ಇಷ್ಟಾನಿಷ್ಟಗಳಿಗೆ ಅನುಗುಣವಾಗಿ ನಡೆದುಕೊಳ್ಳಬೇಕು; ಗಂಡನ ಜೀವನ ವಿಧಾನಕ್ಕೆ ಹೊಂದಿಕೊಂಡು ಬಾಳಬೇಕು ಎಂದು ಕಬೀರ ಹೇಳಿದ್ದಾನೆ. ಪತ್ನಿಯ ಜೀವನವೇ ಗಂಡನ ಬದುಕಿಗೆ ಮುಡಿಪಾಗಿರಬೇಕು ಎಂದೂ ಹೇಳಲಾಗಿದೆ. ಗಂಡನು ಇರುವಾಗ ಮಾತ್ರವೇ ಇನ್ನಿತರರೊಂದಿಗೆ ಮಾತಾಡಬೇಕು ಅಥವಾ ನಕ್ಕು ನಲಿಯಬಹುದು ಎಂದೂ ಕಬೀರ ನಿರ್ದಿಷ್ಟ ಪಡಿಸಿದ್ದಾನೆ. ನಂಬಿಗಸ್ಥ ಪತ್ನಿಗೆ ಪೋಷಣೆ ಮತ್ತು ರಕ್ಷಣೆ ಸಿಕ್ಕಬೇಕು ಎಂದು ಕಬೀರ ಹೇಳಿದ್ದಾನೆ. ಗಂಡಸು ಹೊಂದಿರಬಹುದಾದ ಅನೇಕಾನೇಕ ಆಸ್ತಿಗಳ ಪೈಕಿ ಪತ್ನಿಯೂ ಒಬ್ಬಳು ಎಂದು ಕೂಡ ಕಬೀರ ನುಡಿದಿದ್ದಾನೆ. ಒಟ್ಟಾರೆ ಅವಳು ಗಂಡನ ಅಧೀನಳು; ಮತ್ತು ಅವಲಂಬಿತಳು. ಆ ಕಾಲದಲ್ಲಿ ರೂಪಿಸಲಾಗಿದ್ದ ಕಟ್ಟು ಕಟ್ಟಳೆಗಳಿಗೆ ಅನುಗುಣವಾಗಿ ಅವಳ ನಡವಳಿಕೆ ಇದೆಯೇ ಇಲ್ಲವೋ ಎಂಬುದರ ಮೇಲೆ ಅವಳನ್ನು ರಕ್ಷಿಸುವುದು ಅಥವಾ ತ್ಯಜಿಸುವುದು ಗಂಡನ ಹಕ್ಕಾಗಿತ್ತು.

ಕಬೀರನ ಪ್ರಕಾರ ಕೆಟ್ಟ ಹೆಂಗಸರೆಂದರೆ, ಸ್ವತಂತ್ರ ಅಥವಾ ಸಾರ್ವಜನಿಕ ಕ್ಷೇತ್ರದಲ್ಲಿನ ಹೆಂಗಸರು ಅಥವಾ ತಮ್ಮ ಸೌಂದರ್ಯವನ್ನೇ ಅಭಿಮಾನದ ವಿಷಯವನ್ನಾಗಿಸಿಕೊಂಡು ಇತರ ಗಂಡಸರನ್ನು ತಮ್ಮ ಮೋಹಪಾಶಕ್ಕೆ ಗುರಿಯಾಗಿಸುವವರು. ಇಂಥ ಹೆಂಗಸರನ್ನು ಮಾಯೆ ಎಂದು ವ್ಯಾಖ್ಯಾನಿಸಲಾಯಿತು; ವಿಷ ಕಕ್ಕುವ ಸರ್ಪಗಳಿಗೆ ಅಥವಾ ವಿಷಯುಕ್ತ ಹಣ್ಣುಗಳಿಗೆ ಅಥವಾ ಉರಿಯುವ ಬೆಂಕಿಗೆ ಅಥವಾ ನರಕದ ಕೂಪಕ್ಕೆ ಇವರನ್ನು ಹೋಲಿಸಲಾಯಿತು. ಇಂಥ ಹೆಂಗಸರ ಸಾಮೀಪ್ಯ ಹಾಗಿರಲಿ, ಇವರು ದೃಷ್ಟಿಗೆ ಬಿದ್ದರೂ ಕೂಡ ಅಪಾಯ ಕಾದಿಟ್ಟಿದ್ದು ಎನ್ನುತ್ತಾನೆ ಕಬೀರ. ಹೆಣ್ಣಿನ ಇಂಥ ನಡವಳಿಕೆ ಅಥವಾ ಇಂಥ ನಡವಳಿಕೆಯಿರುವ ಹೆಣ್ಣು ಮಾಯೆ ಅಥವಾ ದುಷ್ಟಶಕ್ತಿ ಎಂದು ಸಮೀಕರಿಸಲಾಯಿತು. ಇಂಥ ಹೆಂಗಸರ ಸಹವಾಸಕ್ಕೆ ಹಾತೊರೆದ ಗಂಡಸರು ಅಂತಿಮವಾಗಿ ಪತನಗೊಳ್ಳುವರು ಎಂದು ಬಣ್ಣಿಸಲಾಯಿತು. ಇಂಥ ಹೆಂಗಸರ ಬಗ್ಗೆ ಬಳಸಲಾದಷ್ಟು ಕಟು ಭಾಷೆಯನ್ನು ಇಂಥ ಹೆಂಗಸರ ಸಹವಾಸಕ್ಕೆ ಬೀಳುವ ಗಂಡಸರ ಬಗ್ಗೆ ಬಳಸಲಾಗಿಲ್ಲ ಎಂಬುದನ್ನು ಗಮನಿಸಬಹುದಾಗಿದೆ. ಆಗಿನ ಕಾಲದ ಪಾಳೆಯಶಾಹಿ, ಪುರುಷ ಪ್ರಧಾನ ಸಮಾಜ ರೂಪಿಸಿದ್ದ ನೀತಿ ನಿಯಮಗಳ ಪ್ರಕಾರ ನಡೆದುಕೊಳ್ಳದ ಹೆಂಗಸರನ್ನು ಕುರಿತಂತೆ ಕಬೀರ ರಚಿಸಿದ ಮಾಯೆ ದೋಹೆಗಳು ಬಣ್ಣಿಸುತ್ತವೆ. ಕಬೀರನ ಪ್ರಕಾರ ಮಾಯೆ ಎಂದರೆ ಮನುಷ್ಯನನ್ನು ದೇವರಿಂದ ಬೇರ್ಪಡಿಸುವ ದುಷ್ಟಶಕ್ತಿ. ಅವನು ಮಾಯೆಯನ್ನು ವೇಶ್ಯೆಯೊಂದಿಗೆ ಸಮೀಕರಿಸುತ್ತಾನೆ; ಚಾಣಾಕ್ಷ ದುಷ್ಟ ಹೆಂಗಸು, ತನ್ನ ಮಾಟದಿಂದ ಗಂಡಸರ ಮೇಲೆ ಮೋಡಿ ಹಾಕುವ ಮಾಟಗಾತಿ ತನ್ನ ವಶೀಕರಣದಿಂದ ಸ್ತ್ರೀಲೋಲನನ್ನಾಗಿ ಮಾಡುತ್ತಾಳೆ ಎಂದೆಲ್ಲಾ ಕಬೀರ ಮಾಯೆಯನ್ನು ವಿವರಿಸಿದ್ದಾನೆ. ಇಂಥ ಹೆಂಗಸರ ವಶಕ್ಕೊಳಗಾಗುವ ಗಂಡಸರು ತಮ್ಮ ಕರ್ಮದಿಂದ ಪಾರಾಗಲು ಸಾಧ್ಯವಿಲ್ಲ.

ಒಳ್ಳೆಯ ಹೆಂಗಸರು ಮತ್ತು ಕೆಟ್ಟ ಹೆಂಗಸರು ಎಂಬುದರ ಬಗೆಗಿನ ಗ್ರಹಿಕೆಯು ಕಬೀರನ ದೋಹೆಗಳಲ್ಲಿ ಸ್ಪಷ್ಟಗೊಳಿಸಲಾಗಿದೆ. ಆಗಿನ ಕಾಲದಲ್ಲಿ ಪುರುಷ ಪ್ರಧಾನ ಸಮಾಜವು ಹೆಂಗಸರಿಗಾಗಿ ಸೃಷ್ಟಿಸಿದ್ದ ನೀತಿ ನಿಯಮಗಳನ್ನು ಹಾಗೂ ಹೆಣ್ಣಿಗೆ

ನೀಡಲಾಗಿದ್ದ ನಿರ್ದಿಷ್ಟ ಸ್ಥಾನವನ್ನು ಸ್ಪಷ್ಟಪಡಿಸುವಲ್ಲಿ ಈ ದೋಹೆಗಳು ಸಮರ್ಥವಾಗಿವೆ.

ಪುರುಷರಿಗೆ ಮತ್ತು ಮಹಿಳೆಯರಿಗೆ ಸಮಾನತೆಯ ತತ್ವವನ್ನು ಕಬೀರ ಎಂದೂ ಅಳವಡಿಸಲಿಲ್ಲ. ಅವನ ಕಾಲಕ್ಕೆ ಈ ತತ್ವವೇ ಪರಕೀಯವಾದುದಾಗಿತ್ತೇನೋ. ಕಬೀರ ಹೆಣ್ಣನ್ನು ಕಾಮಕ್ಕೆ ಸಮೀಕರಿಸಿದ; ಸಮಾಜದಲ್ಲಿನ ಸಮಸ್ಯೆಗಳಿಗೆ ಹಾಗೂ ದುಃಖಕ್ಕೆ ಮುಖ್ಯ ಕಾರಣ ಕಾಮ ಎಂದು ಅವನು ವಿಶದ ಪಡಿಸಿದ; ಮತ್ತು ಇದುವೇ ಒಬ್ಬ ನಿಜ ಭಕ್ತನ ಬದುಕಿನಲ್ಲಿ ಎದುರಾಗುವ ಬಹುದೊಡ್ಡ ಅಡ್ಡಿ ಎಂದು ಬಣ್ಣಿಸಿದ. ನಿಜ ಭಕ್ತರ ಸಂಖ್ಯೆ ಅತಿ ಚಿಕ್ಕದು; ನಾನಾ ರೀತಿಯ ಕಾಮನೆಗಳಿಗೆ ಮರುಳಾಗುವವರೇ ಹೆಚ್ಚು ಜನ; ಇಂಥ ಕಾಮನೆಗಳಲ್ಲಿ ಅತಿ ಪ್ರಖರವಾದುದು ಕಾಮ; ಇದರಿಂದ ಸನ್ಯಾಸಿಗಳೂ ಕೂಡ ಮುಕ್ತರಾಗಲು ಸಾಧ್ಯವಾಗಲಿಲ್ಲ ಎಂದ ಕಬೀರನಿಗೆ, ಹೆಂಗಸು ಕಾಮದ ಪ್ರತಿರೂಪವಾಗಿ ಕಂಡಳು; ಅವಳು ಪಾಪಿಣಿಯಾಗಿ, ಡಾಕಿಣಿ (ನಾಶಕಿ)ಯಾಗಿ ಮತ್ತು ಮೋಹಿನಿಯಾಗಿ ಕಂಡಳು. ಹುಷಾರಾಗಿ ವರ್ತಿಸಬೇಕಾದ ಅಪಾಯಕರ ವಸ್ತುಗಳಲ್ಲಿ ಹೆಣ್ಣು ಒಂದು ಎಂದು ಕಬೀರ ನಂಬಿದ್ದ.

ಕಬೀರ ಪಾಪವನ್ನು ದ್ವೇಷಿಸುತ್ತಿದ್ದನೇ ಹೊರತು ಪಾಪಿಗಳನ್ನಲ್ಲ. ಆದ್ದರಿಂದ ಅವನು ಗಂಡಸರ ಗಮನವನ್ನು ತನ್ನತ್ತ ಸೆಳೆಯುವ ಹೆಣ್ಣನ್ನು ದ್ವೇಷಿಸಿದ; ಈ ಹೆಣ್ಣುಗಳೇ ಅವನಿಗೆ ಪಾಪದ ಪ್ರತಿರೂಪವಾಗಿ ಕಂಡರು. ಹೆಣ್ಣಿನ ಸಹವಾಸವೆಂದರೆ ನರಕದ ಸಹವಾಸ ಎಂದ ಕಬೀರ, ಹೆಣ್ಣಿನ ಸಹವಾಸಕ್ಕೊಳಗಾದ ಅಥವಾ ಅವಳ ಪ್ರಭಾವಕ್ಕೆ ಸಿಲುಕಿದ ಜಗತ್ತಿನಲ್ಲಿ ಶಕ್ತಿ ಮತ್ತು ಜೀವ ತುಂಬಿರಲು ಸಾಧ್ಯವಿಲ್ಲ ಎಂದು ತೀರ್ಮಾನಿಸಿದ್ದ. ಹೆಣ್ಣು ಘನಘೋರ ಅಪಾಯಕಾರಿ. ಏಕೆಂದರೆ ನೇಣುಗಂಬವನ್ನೇರಿದರೂ ಕೂಡ ಕೆಲವೊಮ್ಮೆ ಜೀವ ಉಳಿಯಲು ಸಾಧ್ಯ ಆದರೆ ಹೆಣ್ಣಿನ ಸಹವಾಸಕ್ಕೆ ಗುರಿಯಾದವ ಎಂದೂ ಜೀವಂತವಾಗಲು ಸಾಧ್ಯವಿಲ್ಲ ಎಂದ ಕಬೀರ. ಕಾಮನೆಯುಳ್ಳ ಹೆಂಗಸು ಕಚ್ಚುವ ಬೆಕ್ಕಿಗೆ ಹಾಗೂ ವಿಷ ಕಕ್ಕುವ ಸರ್ಪದಂತೆ ಎಂದು ಕಬೀರ ಹೋಲಿಸಿದ್ದಾನೆ. ಇನ್ನೊಂದು ಕಡೆ ಅವನು, 'ಹೆಣ್ಣಿನ ನೆರಳು ಐದು ಹೆಡೆಗಳ ಸರ್ಪವೊಂದರ ಮೇಲೆ ಬಿದ್ದರೆ ಅದು ಕುರುಡಾಗುತ್ತದೆ ಎಂಬ ಮಾತಿರುವಾಗ, ದಿನನಿತ್ಯ ಹೆಣ್ಣಿನ ಸಹವಾಸಕ್ಕೆ ಸಿಲುಕುವ ಸಾಮಾನ್ಯನ ಪಾಡಿನ್ನೇನು? ಎಂದು ಪ್ರಶ್ನಿಸುತ್ತಾನೆ.

ಕಬೀರನಿಗೆ ವಿವಾಹಗಳಂಥ ಸಾಮಾಜಿಕ ಸಂಸ್ಥೆಗಳ ಬಗ್ಗೆ ಸ್ಪಷ್ಟ ಕಲ್ಪನೆ ಇತ್ತು. ಮುಸಲ್ಮಾನರು ಕುಟುಂಬಗಳಲ್ಲಿ ಹಾಗೂ ಹತ್ತಿರದ ಸಂಬಂಧಿಕರೊಂದಿಗೆ ವಿವಾಹ ಸಂಬಂಧ ಬೆಳೆಸುವುದನ್ನು ಅವನು ಖಂಡಿಸಿದ. ಆದರೆ ಅವನು ಬಾಲವಿವಾಹವನ್ನು ಖಂಡಿಸಲಿಲ್ಲ; ವಿಧವಾ ವಿವಾಹವನ್ನು ಬೆಂಬಲಿಸಲಿಲ್ಲ; ಉನ್ನತ ವರ್ಗಗಳಲ್ಲಿ ಸಾಮಾನ್ಯವಾಗಿದ್ದ ಬಹುಪತ್ನಿತ್ವವನ್ನು ಹಳಿಯಲಿಲ್ಲ. ಕಬೀರ ಸತಿ ಪದ್ಧತಿಯನ್ನು ಸ್ತುತಿಸಿದ್ದೂ ಉಂಟು; ಇದನ್ನು ಅವನು ಆತ್ಮ ಮತ್ತು ಪರಮಾತ್ಮ ಪುನರ್ಮಿಲನಗೊಳ್ಳುವ ಪ್ರಕ್ರಿಯೆಯಾಗಿ ಬಣ್ಣಿಸಿದ. ಸತಿ ಪದ್ಧತಿಯು ಧರ್ಮವಾದುದು; ಇದನ್ನು ಅನುಸರಿಸಲೇಬೇಕೆಂದು ಅವನು ಹೇಳಿದ. ಹೀಗಾದಾಗ ರುದ್ರಭೂಮಿ ಕೂಡ ಸತಿಯಾದವಳ ನಿಷ್ಠೆಯನ್ನು ಹಾಗೂ ಶೌರ್ಯವನ್ನು ವರ್ಣಿಸುತ್ತದೆ ಎಂದು ಹೇಳಿದ. ಪರ್ದಾ ಎಂಬುದೊಂದು ಸಾಮಾನ್ಯವಾಗಿ ಪ್ರಚಲಿತದಲ್ಲಿದ್ದ ಪದ್ಧತಿ ಎಂದು ಅವನು ದಾಖಲಿಸಿದ. ಹೆಣ್ಣಿಗೆ ಕೆಲವೊಂದು ವೈಯಕ್ತಿಕ ಹಾಗೂ ತಾತ್ವಿಕ ಮಿತಿಗಳನ್ನು ಹೇರಲಾಯಿತು. ಅವರು ಪರ್ದಾದೊಳಗೆ ಇರಬೇಕೆಂದೂ, ತಮ್ಮ ಗಂಡನಲ್ಲದೆ ಇತರೆ ಯಾರೊಂದಿಗೂ ಅವರು ಮಾತಾಡಕೂಡದೆಂದೂ ನಿರ್ಬಂದಗೊಳಿಸಲಾಯಿತು. ಹೆಣ್ಣನ್ನು ಮನೆಯೊಳಗೆ ಕೂಡಿಡಲಾಯಿತು. ಸಾರ್ವಜನಿಕ ಜೀವನದಲ್ಲಿ ಅವಳು ಪ್ರವೇಶಿಸುವುದು ನಿಷಿದ್ಧ ಎಂದು ಸಾರಲಾಯಿತು. ಇಹಲೋಕದ ಭೋಗಜೀವನದಿಂದ ಮನುಷ್ಯ ಬದುಕನ್ನು ಬೇರ್ಪಡಿಸುವ ಸಂದರ್ಭದಲ್ಲಿ, ಹೆಣ್ಣು ಭೋಗ ಜೀವನದ ಪ್ರತೀಕವೆಂದು ಕಬೀರ ಗ್ರಹಿಸಿದ; ಅಂದರೆ ಹೆಣ್ಣು ಕಾಮನೆಗಳನ್ನು ಕೆರಳಿಸಿ, ಭೋಗಜೀವನದತ್ತ ಸೆಳೆಯುವ ವಸ್ತು ಎಂದು ಪರಿಗಣಿತಳಾದಳು.

ಸುರೇಶ ಅಗರವಾಲ್ ಅವರ ಪ್ರಕಾರ, ಕಬೀರನ ಕಾಲದಲ್ಲಿ ಜನಪ್ರಿಯ ಸಂತಮತದ ಪ್ರಧಾನ ಲಕ್ಷಣಗಳೆಂದರೆ:

(ಅ) ನಿರ್ಗುಣ, ನಿರಾಕಾರ ರಾಮನಲ್ಲಿ ನಂಬಿಕೆ

(ಆ) ಒಬ್ಬ ದೇವರಿಗಿಂತ ಹೆಚ್ಚು ಸಂಖ್ಯೆಯ ದೇವರಲ್ಲಿ ಹಾಗೂ ಅವತಾರಗಳಲ್ಲಿ ನಂಬಿಕೆಯಿಲ್ಲದಿರುವುದು

(ಇ) ಬೋಧಕನ ಮಹತ್ವ

(ಈ) ಜಾತಿ ಪದ್ಧತಿಗೆ ವಿರೋಧ

(ಉ) ಮೂಢನಂಬಿಕೆಯ ಕುರುಡು ನಂಬಿಕೆಗಳಿಗೆ ವಿರೋಧ

(ಊ) ಪ್ರೀತಿ ಮತ್ತು ಸತ್ಯಗಳಿಗೆ ಪ್ರೋತ್ಸಾಹ

(ಋ) ಚಾಡಿಕೋರ ಹೆಂಗಸು

ಕಬೀರನ ದೃಷ್ಟಿಯಲ್ಲಿ, ಒಬ್ಬ ಆದರ್ಶ ಮನುಷ್ಯ "ತನ್ನ ವಂಶ, ಧರ್ಮ ಅಥವಾ ಕುಟುಂಬದ ಬಗ್ಗೆ ಮೇಲರಿಮೆ ಹೊಂದಿರಬಾರದು; ಯಾವುದೇ ಹೊರಗಿನ ನಂಬಿಕೆಯ ಬಂಧನಕ್ಕೊಳಗಾಗಿರಬಾರದು. ಒಬ್ಬ ನೈಜ ಸಂತ ಎಲ್ಲಾ ನೈತಿಕ ಮತ್ತು ಸಾಮಾಜಿಕ ಮೌಲ್ಯಗಳನ್ನು ಹೊಂದಿರಬೇಕು. ಅಂದರೆ ಅವನಿಗೆ ತನ್ನ ಇಂದ್ರಿಯಗಳ ಮೇಲೆ ನಿಗ್ರಹ ಇರಬೇಕು; ಅವನು ಯೋಗ ಅಥವಾ ಸ್ವಯಂಶಿಸ್ತಿಗೆ ಒಳಪಟ್ಟಿರಬೇಕೇ ಹೊರತು

ಭೋಗ ಅಥವಾ ದೈಹಿಕ ಸುಖಲೋಲುಪತೆಗಳಿಗೆ ದಾಸನಾಗಿರಕೂಡದು. ಇತರ ಸಾಮಾನ್ಯರಂತೆ ನೈಜ ಸಂತನು ಲೈಂಗಿಕ ಇಚ್ಛೆಗಳಿಗೆ ಮಣಿಯುವನಾಗಿರಕೂಡದು. ವಾಸ್ತವವಾಗಿ, ಕಾಮ ಅಥವಾ ಭೋಗಾಸಕ್ತಿ ಮನುಷ್ಯನ ಅಧೀನದಲ್ಲಿರಬೇಕು ಎಂದು ಕಬೀರ ಹೇಳುತ್ತಾನೆ. ರೂಢಿಗತ ಸಾಮಾಜಿಕ ನಿಯಮಗಳನ್ನು ಮೀರುವ ಪುರುಷರನ್ನೂ ಕೂಡ ಕಬೀರನು ಮಹಿಳೆಯರನ್ನು ಹೀಗಳೆಯುವಂತೆಯೇ ಹೀಗಳೆಯುತ್ತಾನೆ. ಬೇರೆ ಹೆಂಗಸರತ್ತ ಆಕರ್ಷಿತರಾಗುವವರು, ಪರಪತ್ನಿಯರಿಗೆ ಮನಸೋಲುವವರು, ಇಹಲೋಕದ ಸುಖಭೋಗಕ್ಕೆ ಮರುಳಾಗುವವರು, ಸದಾ ಮಾಯೆಯ ಮೋಹಪಾಶದಲ್ಲಿ ಸಿಲುಕಿರುವವರು ಹೀಗೆ ಇಂಥ ಗಂಡಸರನ್ನೂ ಕಬೀರ ಕೆಟ್ಟ ಗಂಡಸರು ಎಂದು ವರ್ಗೀಕರಿಸಿದ್ದಾನೆ. ಆದರೆ ಕಬೀರನು ಇಂಥ ಕೆಟ್ಟ ಗಂಡಸರನ್ನು ಕೆಟ್ಟ ಹೆಂಗಸರನ್ನು ಟೀಕಿಸುವಷ್ಟು ಕಠಿಣವಾಗಿ ಟೀಕಿಸುವುದಿಲ್ಲ. ಇದರಿಂದ ಗಂಡಸರಿಗೆ ಕೆಲವೊಂದು ಸ್ವಾತಂತ್ರ್ಯ ಇರುತ್ತದೆ ಆದರೆ ಹೆಂಗಸರು ಮಾತ್ರ ಸದಾ ಅಪಕೀರ್ತಿ ಹೊರಬೇಕಾಗುತ್ತದೆ; ಗಂಡಸರು ಮಾಡುವ ತಪ್ಪುಗಳಿಗೂ ಕೂಡ ಹೆಂಗಸರೇ ಅಪವಾದ ಹೊರಬೇಕಾಗುತ್ತದೆ ಎಂಬುದು ಸ್ಪಷ್ಟವಾಗುತ್ತದೆ.

ಕಬೀರನು ತನ್ನ ದೋಹೆಗಳಲ್ಲಿ ಆ ಕಾಲದ ಸಾಮಾಜಿಕ ಬದುಕಿನ ಸಮಗ್ರ ಚಿತ್ರಣವನ್ನು ನೀಡಿದ್ದಾನಾದರೂ, ಅವನ ಮನುಷ್ಯಕುಲದ ಕಲ್ಪನೆಯಲ್ಲಿ ಹೆಣ್ಣಿಗೆ ತುಂಬಾ ಕಮ್ಮಿ ಸ್ಥಾನವಿದೆ ಅಥವಾ ಸ್ಥಾನವೇ ಇಲ್ಲವೆಂದರೂ ತಪ್ಪಾಗದು. ಕಬೀರನ ದೋಹೆಗಳಿಂದ ದೊರಕುವ ಹೆಣ್ಣಿನ ಚಿತ್ರಣವನ್ನು ಗಮನಿಸಿದಾಗ, ಆ ಕಾಲದಲ್ಲಿ ಹೆಣ್ಣಿಗೆ ಅತ್ಯಂತ ಕೆಳಗಿನ ಸ್ಥಾನವು ಅಂದಿನ ಸಾಮಾಜಿಕ ಜೀವನದಲ್ಲಿ ದೊರಕಿತ್ತೆಂಬುದು ನಿಚ್ಚಳವಾಗುತ್ತದೆ.

ನೈಜ ಭಕ್ತ ಸಂಸಾರ ಬಂಧನವನ್ನು ಕಳಚಿಕೊಂಡು ಕಾಡು ಸೇರಬೇಕೆಂಬ ಪ್ರಚಲಿತ ನಂಬಿಕೆಯನ್ನು ಕಬೀರ ಬಲವಾಗಿ ವಿರೋಧಿಸಿದ. ತನ್ನ ಕುಟುಂಬಕ್ಕೆ ಹಾಗೂ ಸ್ವೀಕರಿಸಿದ ವೃತ್ತಿಗೆ ನಿಷ್ಠನಾಗಿ, ನ್ಯಾಯ ನೀಡಿದವನೇ ನಿಜ ಭಕ್ತ ಎಂಬುದು ಕಬೀರನ ನಂಬಿಕೆಯಾಗಿತ್ತು. ಆದರೆ ಇಂಥವ ಮಾಯೆ ಬೆಂಬತ್ತಿ ದಾರಿ ತಪ್ಪಬಾರದು ಹಾಗೂ ಇಂದ್ರಿಯ ಸುಖಕ್ಕೆ ಮರುಳಾಗಬಾರದು. ಇಹಲೋಕವೆಂಬುದು ಸತ್ಯ; ಆದರೂ ಇಲ್ಲಿ ಚಿರಕಾಲ ಉಳಿಯಲು ಸಾಧ್ಯವಿಲ್ಲ ಎಂಬುದನ್ನು ಅರಿತಿದ್ದು, ಇಲ್ಲಿನ ಸುಖಭೋಗಕ್ಕೆ ಮೈಮರೆತು ಹೋಗಬಾರದೆಂಬುದು ಕಬೀರನ ನಿಲವಾಗಿತ್ತು. ಆದ್ದರಿಂದಲೇ ಅವನು ದೇವರೊಬ್ಬನೇ ಚಿರಸತ್ಯ, ಇಲ್ಲಿ ನಾವು ಇರುವುದೊಂದು ಸಂಕ್ರಮಣಕಾಲ ಮಾತ್ರ ಎಂದು ಹೇಳಿದ್ದಾನೆ.

**ದೇವರು ಮತ್ತು ಹೆಣ್ಣು : ಎರಡು ಕಲ್ಪನೆಗಳ ನಡುವಣ ಸಂಬಂಧ**

ದೇವರನ್ನು ಸಾಕ್ಷಾತ್ಕರಿಸಿಕೊಳ್ಳಲು ಕಬೀರ ಹೆಣ್ಣನ್ನು ಆಶ್ರಯಿಸುತ್ತಾನೆಂಬುದೊಂದು ಆಶ್ಚರ್ಯದ ಸಂಗತಿಯೇ ಸೈ. ಎಲ್ಲಾ ಪಾಪಗಳಿಂದ ಅತೀತವಾಗಿ ಉಳಿಯುವ ಪತಿವ್ರತೆಗೆ ದೇವರು ಸಾಕ್ಷಾತ್ಕಾರಗೊಳ್ಳುತ್ತಾನೆಂದು ಕಬೀರ ಬಣ್ಣಿಸಿದ್ದಾನೆ. ಕಬೀರನ ಪ್ರಕಾರ, ಭಕ್ತಿಪಂಥದ 'ಸತಿ-ಪತಿ ಭಾವ'ದ ಮೂಲಕ ದೇವರನ್ನು ಸಮೀಪಿಸಲು ಸಾಧ್ಯ; ಇದಕ್ಕೆ ಯಾವ ಮಧ್ಯವರ್ತಿ ಬೇಕಾಗಿಲ್ಲ; ಈ ಬಗೆಯಲ್ಲದೆ ದೇವರ ಜೊತೆಗೆ ಸಂಪರ್ಕ ಬೆಳೆಸಲು ಅನ್ಯದಾರಿಯಿಲ್ಲ.

ನನ್ನ ದೇಹ-ಮನಸು ಮಂಕಾಗಿವೆ
ಕಾರಣ, ನನ್ನೊಂದಿಗೆ ನೀನಿಲ್ಲ
ಅಂದರೆ ನನ್ನ ಪ್ರೀತಿ ಏನಿದು?
ಪ್ರಿಯತಮೆಗೆ ಪ್ರಿಯಕರನ ಬಯಕೆ
ಬಾಯಾರಿದವ ನೀರು ಬಯಸುವಂತೆ

ಪ್ರೀತಿಯೆಂಬ ಹಣ್ಣಿನ ರಸ ಸವಿಯುವ ತೀವ್ರತೆ ಆದರೂ ಸದ್ಗುಣ ಕಳೆದುಕೊಳ್ಳಬಾರದೆಂಬ ಬಯಕೆಯೂ ಇದೆ ಎನ್ನುತ್ತಾನೆ ಕಬೀರ. ಇದು ಹೇಗೆ ಸಾಧ್ಯ? ಪ್ರಿಯತಮೆಯ ಪ್ರೀತಿ ಸವಿದು ನಾನು ತೃಪ್ತನಾದೆ. ನಾನು ಇನ್ನೂ ಹಲಬಗೆಯ ಸವಿ ಉಂಡಿರುವೆನಾದರೂ, ಪ್ರೀತಿಯಂಥ ಸವಿ ಎಲ್ಲೂ ಕಾಣೆ. ದೇಹಕ್ಕೆ ಸಂತೋಷ ಸೋಂಕುತ್ತಲೆ, ಅನಿರ್ವಚನೀಯ ಅಮೂಲ್ಯ ಭಾವನೆಗಳು ಗರಿಗೆದರಲಾರಂಭಿಸುತ್ತವೆ. ಬೆಂಕಿಯ ಶಾಖವನ್ನು ಸಹಿಸೇವು; ಖಡ್ಗದಿಂದಾದ ಗಾಯದ ನೋವನ್ನು ಸಹಿಸೇವು ಆದರೆ ಪ್ರೀತಿಯನ್ನು ಏಕರೀತಿಯಲ್ಲಿ ಹಿಡಿದಿಟ್ಟುಕೊಳ್ಳುವುದು ದುಸ್ಸಾಧ್ಯ.

ದಮನಿತ ಗುಂಪುಗಳ ಪರವಾಗಿ ನಿರಂತರವಾಗಿ ಕೇಳಿ ಬಂದ ಕಬೀರನ ಸುಧಾರಣಾವಾದಿ ತವಕವು, ಒಂದರ್ಥದಲ್ಲಿ, ದಮನಿತ ಮಹಿಳೆಯರ ಪರವಾಗಿಯೂ ಇತ್ತು. ಪುರುಷನಿಗೂ ಮಿಗಿಲಾದ ದೇವರನ್ನು ಕಾಣಲು ಕಬೀರ ಹೆಣ್ಣಿನ ಅವಶ್ಯಕತೆಯನ್ನು ಕಂಡ. ಯಾವ ಮರುಪ್ರಶ್ನೆ ಹಾಕದೇ ಅವನು ಈ ಸ್ಥಾನಕ್ಕೆ ಬಂದ. ಅವನಿಗೆ ಅನ್ಯಮಾರ್ಗವೇ ಇರಲಿಲ್ಲ. ಹೆಣ್ಣಿನ ಸ್ವರೂಪದಲ್ಲಲ್ಲದೆ ಭಕ್ತಿಯೂ, ದೇವರೂ ಇರಲು ಸಾಧ್ಯವಿಲ್ಲ ಎಂದು ಕಬೀರ ಗ್ರಹಿಸಿದ್ದ. ಬದುಕಿನುದ್ದಕ್ಕೂ ಸಮಾನತೆಯ ಪರವಾಗಿ, ಸಾಮಾಜಿಕ ಶ್ರೇಣಿ ಹಾಗೂ ಜಾತಿಪದ್ಧತಿಗಳ ನಾಶಕ್ಕಾಗಿ ಮಾತಾಡಿದ ಕಬೀರ ಹೆಣ್ಣನ್ನು ಗಂಡನ ಅಡಿಯಾಳಾಗಿ ಕಂಡ; ಅವಳ ಮೇಲೆ ಗಂಡನು ಅಧಿಕಾರ ಚಲಾಯಿಸುವುದನ್ನು ಸಮ್ಮತಿಸಿದ. ಇದಕ್ಕೆ ಕಾರಣ, ಸಮಸ್ತ 'ಮನುಷ್ಯ ಕುಲ'ಕ್ಕಾಗಿ ಆಗ್ರಹಿಸಿದ ಕಬೀರನ ಸಮಾನತೆಯ ಕಲ್ಪನೆಯ ಕಕ್ಷೆಯೊಳಗೆ - ಒಂದು ಹಂತದ ಬಳಿಕ- ಹೆಣ್ಣಿಗೆ ಜಾಗವೇ ಇರಲಿಲ್ಲವೆಂಬುದಾಗಿರಲು ಸಾಕು. ಇದು ಅವನಿಗೆ ಸಹಜವಾದುದಾಗಿರಲೂಬಹುದು; ಏಕೆಂದರೆ, ತನಗೆ

ಸುಧಾರಣಾವಾದಿ ಉತ್ಸುಕತೆ ಎಷ್ಟೇ ಇದ್ದರೂ, ಮಹಿಳೆಯರ ಸಮಸ್ಯೆಗಳನ್ನು ಅವನು ಗಂಭೀರವಾಗಿ ಪರಿಗಣಿಸಿರಲಿಲ್ಲ. ಬದಲಾಗಿ, ಸಮಾಜದಲ್ಲಿನ ಸಮಸ್ಯೆಗಳಿಗೆ ಹೆಣ್ಣೇ ಪ್ರಧಾನ ಕಾರಣ ಎಂದು ಅವನು ವಾದಿಸಿದ.

ಕಬೀರನಂಥ ಹೊಸ ಆಲೋಚನೆಯ ಕವಿಯೊಬ್ಬ ಲಿಂಗಾಧಾರಿತ ಪ್ರಶ್ನೆಗಳನ್ನು ಇಷ್ಟೊಂದು ನಗಣ್ಯವಾಗಿ ಕಂಡದ್ದು ಸೋಜಿಗವೇ. ದಕ್ಷಿಣದಲ್ಲಿ ಕಾಣಿಸಿಕೊಂಡ ೧೨ನೇ ಶತಮಾನದ ವಚನಕಾರರ ಚಳವಳಿಯು ಕುಲವೃತ್ತಿ ಅವಲಂಬಿತರನ್ನು ಹಾಗೂ ಸಾಮಾಜಿಕ ಶ್ರೇಣಿಯಲ್ಲಿ ಕೆಳಸ್ಥಾನದಲ್ಲಿದ್ದವರನ್ನು ಒಳಗೊಂಡಿತ್ತು. ಅದೊಂದು ವ್ಯವಸ್ಥೆ ವಿರೋಧಿ ಹಾಗೂ ಬ್ರಾಹ್ಮಣವಿರೋಧಿ ಚಳವಳಿಯಾಗಿತ್ತು. ಅದು ಚರ್ಚಿಸಿದ ಸಾಮಾಜಿಕ ಸಮಸ್ಯೆಗಳು ಹೆಚ್ಚು ಕಮ್ಮಿ ಕಬೀರ ಚರ್ಚಿಸಿದಂಥವುಗಳೇ ಆಗಿದ್ದವು. ವಾಸ್ತವವಾಗಿ, ಆ ಕಾಲದಲ್ಲಿ ಅನೇಕ ಮಹಿಳೆಯರು ಕಾವ್ಯ ರಚಿಸಿದರಷ್ಟೇ ಅಲ್ಲದೆ, ಸಮಾಜದಲ್ಲಿ ಮಹಿಳೆಯರ ಪಾತ್ರವನ್ನು ಪುನರ್ ವ್ಯಾಖ್ಯಾನ ಮಾಡಿದರು. ಕಬೀರನಲ್ಲಿ ಇಂಥ ಪ್ರಯತ್ನ ಕಾಣುವುದಿಲ್ಲ; ಮಹಿಳೆಯರ ಸಮಸ್ಯೆಗಳನ್ನು ಅರ್ಥಮಾಡಿಕೊಳ್ಳಲಾದರೂ ಕಬೀರ ಪ್ರಯತ್ನಿಸಿರುವುದು ಕಾಣುವುದಿಲ್ಲ. ಜಾತಿ ತಾರತಮ್ಯ ನಾಶ ಮತ್ತು ಲಿಂಗ ತಾರತಮ್ಯ ನಾಶ ಎಂಬ ಎರಡು ಸುಧಾರಣಾವಾದಿ ನಿಲವುಗಳ ಮಧ್ಯೆ ಕಬೀರನಲ್ಲಿ ಸಂಘರ್ಷ ಮೂಡಿತ್ತು. ಆದರೆ ಇಂಥ ಸಂಘರ್ಷ ವಚನಕಾರರಲ್ಲಿರಲಿಲ್ಲ; ಇದಕ್ಕೆ ಕಾರಣ, ಅವರು ನಂಬಿದ್ದಂತೆ ಗಂಡು-ಹೆಣ್ಣಿನ ದೇಹದೊಳಗಣ 'ಜೀವಾತ್ಮ' ಗಂಡೂ ಆಗಿರಲಿಲ್ಲ, ಹೆಣ್ಣು ಆಗಿರಲಿಲ್ಲ. ಇಂಥ ತಿಳುವಳಿಕೆಯಿಂದಾಗಿಯೇ ವಚನಕಾರ ಚಳವಳಿಯೂ-ತನ್ನೆಲ್ಲ ಮಿತಿಗಳ ನಡುವೆಯೂ-ಮಹಿಳೆಯರಿಗೆ ಸಾರ್ವಜನಿಕ ಜೀವನದಲ್ಲಿ ಸ್ಥಾನ ಒದಗಿಸು ವಂತಾಯಿತು. ಆದರೆ ಕಬೀರ ಜೀವಾತ್ಮ ಮತ್ತು ಪರಮಾತ್ಮಗಳನ್ನು ಅರ್ಥೈಸಿಕೊಂಡ ಹಾಗೂ ದಾಂಪತ್ಯದ ಬಗ್ಗೆ ಕಲ್ಪನೆ ರೂಪಿಸಿಕೊಂಡ ಬಗೆಯೇ ಅವನಿಗೆ ಸಮಸ್ಯೆ ತಂದಿಡುತ್ತದೆ; ಈ ಸಮಸ್ಯೆ ಯಿಂದಾಗಿಯೇ ಮಹಿಳೆಯರು ರಕ್ತ-ಮಾಂಸ-ಮನಸು ಹೊಂದಿದವ ರೆಂದುಬುದನ್ನು ಗ್ರಹಿಸುವುದು ಅವನಿಗೆ ಸಾಧ್ಯವಾಗುವುದಿಲ್ಲ. ಈ ವರ್ಗೀಕರಣವು ಬಲಿಷ್ಠ ಹಾಗೂ ಕನಿಷ್ಠ ಸ್ಥಾನಗಳನ್ನು ನಿರ್ಮಿಸುತ್ತದೆ; ಭಕ್ತನು ಕನಿಷ್ಠ ಸ್ಥಾನ ಸ್ವೀಕರಿಸ ಬೇಕಾಗುತ್ತದೆ; ಕನಿಷ್ಠರು ತಮ್ಮ ಸ್ಥಾನವನ್ನು ಒಪ್ಪಿಕೊಂಡು, ಅದು ತಮ್ಮ ಒಳಿತಿಗಾಗಿಯೇ ಎಂದು ನಂಬುವಂತೆ ಮಾಡುತ್ತದೆ. ಕುಟುಂಬದ ಬಗ್ಗೆ-ವಿಶೇಷವಾಗಿ ಗಂಡ-ಹೆಂಡತಿ ನಡುವಣ ಸಂಬಂಧದ ಬಗ್ಗೆ-ಹೊಂದಿದ ಗ್ರಹಿಕೆಯು ದೇವರೊಂದಿಗೆ ತಾದಾತ್ಮ್ಯ ಹೊಂದಲು ಅವಕಾಶನೀಡುತ್ತದೆ. ಆದ್ದರಿಂದ, ಕಬೀರನ ದೃಷ್ಟಿಯಲ್ಲಿ, ಜೀವಾತ್ಮ ಸದಾ ಹೆಣ್ಣಾಗಿರುತ್ತಾನೆ.

ಆಧ್ಯಾತ್ಮಿಕವಾಗಿ ಕಬೀರನು ಹೆಣ್ಣಾಗಿ ಕಂಡರೆ, ಸಾಮಾಜಿಕ ವಾಗಿ ಅವನು ಗಂಡಾಗಿ ಗೋಚರಿಸುತ್ತಾನೆ. ಬಲಿಷ್ಠರನ್ನು ಪ್ರಶ್ನಿಸದ ಕನಿಷ್ಠರ ಸ್ಥಾನದಲ್ಲಿ ಕಬೀರ ನಿಂತು ಬಿಡುವುದರಿಂದಾಗಿ ತಾನು ಕನಿಷ್ಠರ ಅಂದರೆ ಮಹಿಳೆಯರ ಸಮಸ್ಯೆಗಳಿಗೆ ಜವಾಬ್ದಾರನೆಂಬ ಭಾವನೆ ಅವನಲ್ಲಿ ಮೂಡಲು ಅವಕಾಶವೇ ಆಗುವುದಿಲ್ಲ; ಈ ಹಿನ್ನೆಲೆಯಲ್ಲಿ ಕಬೀರ ಪ್ರತಿಪಾದಿಸುವ ಭಕ್ತಿಯೆಂದರೆ, ಪುನರ್ ಸೃಷ್ಟಿಯಾಗುವ ಪುರುಷ ಪ್ರಾಧಾನ್ಯದ ಪ್ರತಿರೂಪವೆಂದೇ ಹೇಳಬಹುದು.

ಕಬೀರನ ಪ್ರಕಾರ ದೇವರು ಒಬ್ಬ ಮತ್ತು ಅವನು ಗಂಡಸು. ಸಹಜವಾಗಿ ಅವನು ಶ್ರೇಣೀಕರಣದಲ್ಲಿ ಮೇಲೇರುತ್ತಾ ಅವನತ್ತ ದೃಷ್ಟಿ ನೆಡುತ್ತಾನೆ. ಗಂಡಸರು ದೇವರೊಂದಿಗೆ ಪ್ರೀತಿ, ವಾತ್ಸಲ್ಯ ಅಷ್ಟೇ ಅಲ್ಲದೆ ಸಂಗಮವನ್ನೂ ಹೊಂದಬಹುದು; ಆದರೆ ಜೀವಾತ್ಮರು ಸದಾಕಾಲಕ್ಕೂ ಪರಮಾತ್ಮನಿಗೆ ಅರ್ಪಿಸಿಕೊಂಡವರು. ಭಕ್ತ/ಜೀವಾತ್ಮ ಇಲ್ಲಿ ಹೆಣ್ಣು; ಇವರು ದೇವರಿಗೆ ಪ್ರಿಯರು. ಉತ್ಕಟ ಭಕ್ತಿ ಹಾಗೂ ಪುನರ್ ಸೃಷ್ಟಿಯಾಗುವ ಪುರುಷ ಪ್ರಾದಾನ್ಯದ ಪ್ರಕ್ರಿಯೆ ಎರಡೂ ಕಬೀರನ ಕಾವ್ಯದಲ್ಲಿ ಜೊತೆ-ಜೊತೆಗೆ ಸಾಗುತ್ತವೆ.

ದೇವರನ್ನು ತಲುಪುವ ಪ್ರಕ್ರಿಯೆಯಲ್ಲಿ ಹೆಣ್ಣಿನ ಕಲ್ಪನೆಯು ಪುರುಷರಿಂದ ಸಾಂಕೇತಿಕವಾಗಿ ಬಳಸಲಾಗಿದೆ. ಏಕೆಂದರೆ ಆಧ್ಯಾತ್ಮ ಲೋಕದಲ್ಲಿ ಮಹಿಳೆಯವರಿಗೆ ಯಾವುದೇ ಸ್ಥಾನವಿಲ್ಲ. ಇದಕ್ಕೆ ಕಾರಣ, ಹೆಣ್ಣು ಒಂದು ವಸ್ತು ಎಂಬ ಹಾಗೂ ದೇವರನ್ನು ಸಾಕ್ಷಾತ್ಕರಿಸಿಕೊಳ್ಳುವ ಪ್ರಕ್ರಿಯೆಯಲ್ಲಿನ ಅಡ್ಡಿ-ಆತಂಕಗಳಲ್ಲಿ ಹೆಣ್ಣು ಒಂದೆಂಬ ಗ್ರಹಿಕೆಯಾಗಿರಬಹುದು.

ಹೆಣ್ಣಿನ ಬಗ್ಗೆ ಕಬೀರ ಮಾಡುವ ವಿಮರ್ಶೆಯು ಮತ್ತು ಹೆಣ್ಣಿಗೆ ಅವನು ಹಾಕುವ ನಿಷಿದ್ಧ ನಿಯಮಗಳು ಕಬೀರನ ಸ್ತ್ರೀರೂಪಿ ಭಕ್ತರಿಗೂ ಅನ್ವಯವಾಗುತ್ತವೆ. ಇವು ಇಲ್ಲಿ ಗ್ರಾಹ್ಯವಾಗುತ್ತವೆ; ಅಲ್ಲದೆ ಮಹಿಳೆಯರನ್ನು ಸಾಮಾಜಿಕ ಶ್ರೇಣಿಯಲ್ಲಿ ಪುರುಷರಿಗೆ ಅಡಿಯಾಳಾಗಿಸುವ ಒಂದು ವಿಶಿಷ್ಟ ಬಗೆಯ ಚೌಕಟ್ಟನ್ನು ಸೃಷ್ಟಿಸುತ್ತದೆ. ಆ ಕಾಲದ ಪ್ರಭುತ್ವ ಹಾಗೂ ಪುರುಷಶಕ್ತಿ ಸೃಷ್ಟಿಸಿದ ಭೌತಿಕ ಸ್ಥಿತಿಯ ಪ್ರತಿಫಲನವೆಂದು ಇದನ್ನು ಗ್ರಹಿಸಬಹುದು.

### ಉಪಸಂಹಾರ

- ಸಾಮಾಜಿಕ ಶ್ರೇಣಿಯಲ್ಲಿ ಮಹಿಳೆಯ ಸ್ಥಾನಮಾನ ಅತಿ ಕನಿಷ್ಠವಾಗಿತ್ತು

- ಮಹಿಳೆಯರಿಗೆ ಭೌತಿಕ ಹಾಗೂ ಆಧ್ಯಾತ್ಮಿಕ ಮಿತಿಗಳನ್ನು ಹೇರಿ, ಅವುಗಳೊಳಗೇ ಅವರನ್ನು ನಿರ್ಬಂಧಿಸಲಾಯಿತು.

- ಆ ಕಾಲದಲ್ಲಿ ಪುರುಷ-ಮಹಿಳೆಯರ ನಡುವಣ ಸಮಾನತೆಯು ಪರಕೀಯ ವಿಷಯವೆನಿಸಿತ್ತು.

- ಹೆಣ್ಣು ಚಾಡಿಕೋರಳೆಂಬ ನಂಬಿಕೆ ಪ್ರಚಲಿತವಾಗಿತ್ತು.

- ಮಹಿಳೆಯರನ್ನು ಪಾಪದೊಂದಿಗೆ ಸಮೀಕರಿಸಲಾಗಿತ್ತು.

- ಮಹಿಳೆಯರನ್ನು ಭೋಗದ ಜೊತೆಗೆ ಗುರುತಿಸಲಾಗಿತ್ತು ಅಂದರೆ ಅವರನ್ನು ಕಾಮತೃಷೆ ಹಿಂಗಿಸುವ ವಸ್ತು ಎಂದು ಪರಿಗಣಿಸಲಾಗಿತ್ತು.

- ಮಹಿಳೆಯರ ಶೋಷಣೆಯನ್ನು ಸಾಮಾನ್ಯವಾದ ಸಹಜ ವಿಷಯವೆಂದು ಪರಿಗಣಿಸಲಾಗಿತ್ತು.

- ಸಮಗ್ರ ಮನುಷ್ಯಕುಲಕ್ಕೆ ಸಮಾನತೆಯನ್ನು ಆಗ್ರಹಿಸಿದ ಸಾಮಾಜಿಕ ಸುಧಾರಣೆಯು, ಒಂದು ಹಂತದ ಬಳಿಕ, ಮಹಿಳೆಯರನ್ನು ಹೊರಗಿಟ್ಟಿತು.

- ಪತಿವ್ರತಾಧರ್ಮ ಮತ್ತು ಸತಿ ಪದ್ಧತಿಗಳು ಬಲವಾಗಿ ಬೆಂಬಲಿಸಲ್ಪಟ್ಟವು.

- ಮೇಲ್ವರ್ಗದವರಲ್ಲಿ ಪ್ರಚಲಿತವಿದ್ದ ಬಾಲವಿವಾಹ ಮತ್ತು ಬಹುಪತ್ನಿತ್ವ ಪದ್ಧತಿಗಳು ಟೀಕಿಸಲ್ಪಡಲಿಲ್ಲ.

- ವಿಧವಾ ವಿವಾಹಪರ ದನಿ ಕೇಳಿಸಲೇ ಇಲ್ಲ.

- ಎಲ್ಲಾ ಪಾಪಗಳ ಮತ್ತು ದುರ್ಗುಣಗಳ ಹೊರೆಯನ್ನು ಹೆಣ್ಣಿನ ಮೇಲೆ ಹೇರಲಾಯಿತು.

- ಸಾಮಾಜಿಕ ನೀತಿಯ ಅಧಃಪತನಕ್ಕೆ ಹೆಣ್ಣೇ ಪ್ರಧಾನ ಕಾರಣವೆಂದು ನಂಬುವಂತೆ ಬಲಾತ್ಕರಿಸಲಾಯಿತು; ಇದಕ್ಕೆ ಪುರುಷ ಪ್ರಧಾನ ಸಮಾಜ ಸುಲಭವಾಗಿ ಮಾನ್ಯತೆ ನೀಡಿತು.

- ಸಾಮಾಜಿಕಶ್ರೇಣಿಯಲ್ಲಿ ಮಹಿಳೆಯರನ್ನು ಪುರುಷರಿಗೆ ಅಡಿಯಾಳಾಗಿ ಅರ್ಥೈಸುವ, ಪರಿಗಣಿಸುವ ಹಾಗೂ ವಿಶ್ಲೇಷಿಸುವ ವಿಶಿಷ್ಟ ಸಾಮಾಜಿಕ ಚೌಕಟ್ಟನ್ನು ನಿರ್ಮಿಸಲಾಯಿತು.

ಪಾಳೆಯಶಾಹಿ ಸಮಾಜ ವ್ಯವಸ್ಥೆಯ ಇಂಥ ಎಲ್ಲಾ ನಿರ್ಬಂಧಗಳಿಂದಾಗಿ ಆ ಕಾಲದ ಮಹಿಳೆಯರು ಅನುಭವಿಸಿದ ಅಭದ್ರತೆಯು ಖಂಡಿತಕ್ಕೂ ಘನ ಘೋರವಾಗಿದ್ದಿರಬೇಕು. ಪುರುಷ ಪ್ರಾಧಾನ್ಯವನ್ನು ಪುನರ್ ಸೃಷ್ಟಿಸುವಂಥ ಅವಕಾಶಗಳನ್ನು ಒಳಗೊಳ್ಳುವ ಭಕ್ತಿಯನ್ನು ಉಲ್ಲೇಖಿಸುವ ಕಬೀರನ ದೋಹೆ ಗಳಿಂದ ಇದನ್ನು ಗ್ರಹಿಸಬಹುದಾಗಿದೆ. ಕಬೀರನ ದೋಹೆಗಳಲ್ಲಿ ಮಹಿಳೆಯರಿಗೆ ಸಂಬಂಧಿಸಿದಂತೆ ಪ್ರತಿಫಲನಗೊಳ್ಳುವ ದೃಷ್ಟಿಕೋನವು, ಸಮಾಜ ಸುಧಾರಕನಾಗಿ ಕಬೀರ ಹೊಂದಿದ್ದ ಮಿತಿಗಳನ್ನು ಹಾಗೂ ಆ ಕಾಲದ ಬಲಿಷ್ಠ ಸಾಮಾಜಿಕ ಸಿದ್ಧಾಂತ ವನ್ನು ಬಹಿರಂಗಗೊಳಿಸುತ್ತದೆ.

(ಈ ಪ್ರಬಂಧವನ್ನು ಸಿದ್ಧಪಡಿಸುವಾಗ ಡಾ|| ಚಿತ್ರಾ ಪಣಿಕ್ಕರ್, ಡಾ|| ಶಿವರಾಮ ಪಡಿಕ್ಕಲ್, ಡಾ|| ರವಿರಂಜನ್ ಡಾ|| ರೇಖಾ ಪಾಂಡೆ, ಡಾ|| ಹೋಶಂಗ್ ಮರ್ಚೆಂಟ್ ಮತ್ತು ತಾತ್ಯಾರಾವ್ ಸೂರ್ಯವಂಶಿ ಇವರ ನೆರವು ಹಾಗೂ ಬೆಂಬಲವನ್ನು ನಾನು ಸ್ಮರಿಸುತ್ತೇನೆ)

*ಕನ್ನಡಕ್ಕೆ : ಶಾರದಾ-ವಿಜಯ್*

## ಗರಿಕೆ

ಚಿಗುರಿ ಮೇಲೇರ ಹೊರಟಲ್ಲೆಲ್ಲಾ
ಬಂದೆರಗುವ ಕಲ್ಲು
ಮತ್ತೆ ಮೇಲೇರಿ ಭುವಿಯನೇ
ಬಿಡುವುದೇನೋ ಎಂಬಗುಲ್ಲು

ಅತ್ತಿತ್ತ ಟಿಸಿಲೊಡೆಯ ಹೊರಟರೂ
ಜರುಗುವ ತುಳಿತ
ಉಸಿರೊಂದನುಳಿಸಿ ಬೇರೆಲ್ಲ ಶಕ್ತಿಯ
ಕಸಿಯುವ ಶಪಥ

ತನ್ನ ಪರಿಧಿಯಿಂದ ಹೊರಬರಲಾರದೆ
ಒಳಗೂ ತೃಪ್ತಿ ಕಾಣದೆ
ಅಲ್ಲೇ ಸುತ್ತೆಲ್ಲಾ ಆಳ ಆಳಕೆ
ಬೇರಿಳಿಸಿ ಭದ್ರಗೊಳಿಸುತ್ತಾ

ಒಂದಾದರೂ ಅವಕಾಶಸಿಕ್ಕರೆ
ಆಕಾಶಕ್ಕೇರುವೆನೆಂದು ಪರಿತಪಿಸುತ್ತಾ
ಭೂತದಲ್ಲೇ ಲೀನವಾಗುತ್ತಾ
ಭವಿಷ್ಯತ್ತನು ಕನಸುತ್ತಾ
ಕಳವಳಗೊಳ್ಳುವ
ತನ್ನ ತಾನೇ ಕನಿಕರಿಸುವ
ಆತ್ಮಾನುಕಂಪಿ!

ಪ್ರಭಾಮಣಿ ನಾಗರಾಜ, ಹಾಸನ

# ಭಾರತದ ಅಣುಕರಡು (The Draft Nuclear Doctrine) -ಒಂದು ಟೀಕೆ

ರಾಷ್ಟ್ರೀಯ ಭದ್ರತಾ ಸಲಹಾ ಸಮಿತಿಯು (National Security Advisary Board) ಅಣುನೀತಿ ಕರಡನ್ನು ಸಿದ್ಧಪಡಿಸಿ 1999ರ ಆಗಸ್ಟ್‌ನಲ್ಲಿ ಬಿಡುಗಡೆ ಮಾಡಿತು. ಇದು ಪೋಕ್ರಾನ್‌ನಲ್ಲಿ ನಡೆಸಿದ ಪರೀಕ್ಷಾರ್ಥ ಅಸ್ಫೋಟಗಳ ನಂತರದ ಅಪಾಯಕಾರಿ ಬೆಳವಣಿಗೆಯಾಗಿದೆ. ಇದು ಜಾರಿಗೆ ಬಂದಲ್ಲಿ ಏಷ್ಯಾ ಖಂಡದಲ್ಲಿ ಶಸ್ತ್ರಾಸ್ತ್ರ ಪೈಪೋಟಿಗೆ ಕುಮ್ಮಕ್ಕು ನೀಡುವುದಲ್ಲದೆ, ಜಾಗತೀಕ ನಿಶ್ಶಸ್ತ್ರೀಕರಣದ ಪ್ರಕ್ರಿಯೆಗೆ ಹಾನಿಯುಂಟು ಮಾಡುತ್ತದೆ. ರಾಜಕೀಯ ದುರುದ್ದೇಶಗಳಿಗೆ ಬಳಸಿಕೊಳ್ಳುವುದಕ್ಕಲ್ಲದೆ, ಅಣ್ವಸ್ತ್ರಗಳ ಉಪಯೋಗವನ್ನು ಕ್ರಮಬದ್ಧಗೊಳಿಸುವುದು ಕರಡಿನ ಉದ್ದೇಶವಾಗಿದೆ. ಕರಡಿನಲ್ಲಿ ಅಣ್ವಸ್ತ್ರಗಳ ಅಗತ್ಯ, ಯಾವ ರೀತಿಯ ಅಣ್ವಸ್ತ್ರಗಳು ಬೇಕೆನ್ನುವುದಕ್ಕೆ ಒತ್ತುನೀಡುವುದರ ಮೂಲಕ ನಿಶ್ಶಸ್ತ್ರೀಕರಣ, ಶಾಂತಿಯುತ ಮಾರ್ಗದ ಉದ್ದೇಶವನ್ನು ಬೇಕಂತಲೇ ಕ್ಷಿಪ್ತಗೊಳಿಸಲಾಗಿದೆ. 60ರ ದಶಕದ ನಂತರದಲ್ಲಿ ಅಣ್ವಸ್ತ್ರ ವಿರೋಧಿ ಅಭಿಪ್ರಾಯವು ಹೆಚ್ಚು ತೀವ್ರವಾಗುತ್ತಿರುವ ಸಂದರ್ಭದಲ್ಲಿ ಕರಡನ್ನು ಬಿಡುಗಡೆ ಮಾಡಿ ಪ್ರಜಾಸತ್ತಾತ್ಮಕ ಚರ್ಚೆಗೆ (ಅಣ್ವಸ್ತ್ರ ದೇಶಗಳೊಂದಿಗೂ) ಒಡ್ಡುವುದಾಗಿ ಹೇಳಿರುವುದರ ಹಿಂದಿನ ಉದ್ದೇಶ ಸ್ಪಷ್ಟವಾಗಿದೆ. ಅಂತರ ರಾಷ್ಟ್ರೀಯ ಮಟ್ಟದಲ್ಲಿ ಅಣ್ವಸ್ತ್ರ ವಿರೋಧಿ ಒತ್ತಡವನ್ನು ನ್ಯಾಯಯುತವಾಗಿ ಎದುರಿಸಲಾರದೆ, ಜವಾಬ್ದಾರಿಯುತ, ಮುಕ್ತ ಪರಿಸ್ಪರ ಚರ್ಚೆಯ ಪ್ರಕ್ರಿಯೆಯ ಹೆಸರಿನಲ್ಲಿ ವಿನಾಶಕಾರಿ ಅಸ್ತ್ರಗಳನ್ನು ಸಮರ್ಥಿಸಿಕೊಳ್ಳಲಾಗಿದೆ.

ಕರಡಿನಲ್ಲಿ ಭಾರತವು ಯಾವ ರೀತಿಯ ಅಣ್ವಸ್ತ್ರಗಳನ್ನು ಹೊಂದಬೇಕೆನ್ನುವುದಕ್ಕೆ ಹೆಚ್ಚು ಒತ್ತು ನೀಡಲಾಗಿದೆ. ಭದ್ರತೆಗಾಗಿ ಹಾಗೂ ಬೆದರಿಕೆಯ ತಂತ್ರವಾಗಿ ಅಣ್ವಸ್ತ್ರಗಳನ್ನು ಹೊಂದುವುದು U.N. (ಸಂಯುಕ್ತ ರಾಷ್ಟ್ರಗಳ)ನ ಶಾಸನವು ನೀಡಿರುವ ಸ್ವರಕ್ಷಣಾ ಹಕ್ಕಿಗೆ ಪೂರಕವಾಗಿಯೇ ಇದೆ ಎಂದು ಕರಡಿನಲ್ಲಿ ತಿಳಿಸಲಾಗಿದೆ. 1995ರಲ್ಲಿ ಭಾರತವು ಅಣ್ವಸ್ತ್ರಗಳನ್ನು ಸ್ಥಾಪಿಸಲು, ಅಭಿವೃದ್ಧಿಪಡಿಸಲು ಕೋರಿ ಅಂತರ ರಾಷ್ಟ್ರೀಯ ನ್ಯಾಯಲಕ್ಕೆ ಮನವಿ ಸಲ್ಲಿಸಿತ್ತು. ಅಣ್ವಸ್ತ್ರಗಳನ್ನು ಸಮರ್ಥಿಸಿಕೊಳ್ಳಲು ಸಂಯುಕ್ತ ರಾಷ್ಟ್ರಗಳ ಶಾಸನವನ್ನು ಬಳಸಿಕೊಂಡಿರುವುದು ಕಪಟತನ. ಅಂತರ ರಾಷ್ಟ್ರೀಯ ನ್ಯಾಯಲವೂ ಸಹ ಸ್ವರಕ್ಷಣೆಯ ಹೆಸರಿನಲ್ಲಿ ಅಣ್ವಸ್ತ್ರಗಳನ್ನು ಬಳಸುವುದನ್ನು ತಿರಸ್ಕರಿಸಿದೆಯಾದರೂ, ಸ್ವರಕ್ಷಣೆಯ ತುರ್ತು ಸಂದರ್ಭದಲ್ಲಿ ಅಣ್ವಸ್ತ್ರಗಳನ್ನು ಉಪಯೋಗಿಸಬಹುದೆಂಬುದಕ್ಕೆ ಏನೂ ಹೇಳಿಲ್ಲ.

ಅಣ್ವಸ್ತ್ರಗಳು ದ್ವೇಷಾಸ್ತ್ರಗಳೆ ಹೊರತು ಭದ್ರತೆಯ ಅಸ್ತ್ರಗಳಲ್ಲ. ಅವು ಎಲ್ಲಾ ಸಂದರ್ಭಗಳಲ್ಲೂ ಅನ್ಯಾಯಯುತ, ಅನೈತಿಕ.

**ಅಣುಕರಡಿನ ಸಂಕ್ಷಿಪ್ತ ವಿವರಣೆ**

ಕರಡಿನಲ್ಲಿ ಒಟ್ಟು 8 ಭಾಗಗಳಿವೆ. 1. ಪ್ರಸ್ತಾವನೆ 2. ಉದ್ದೇಶಗಳು 3. ಅಣ್ವಸ್ತ್ರಪಡೆ 4. ಯೋಗ್ಯತೆ ಮತ್ತು ಉಳಿಸಿಕೊಳ್ಳುವಿಕೆ 5. ನಿಯಂತ್ರಣ 6. ಭದ್ರತೆ ಮತ್ತು ಸುರಕ್ಷತೆ 7. ಸಂಶೋಧನೆ ಮತ್ತು ಅಭಿವೃದ್ಧಿ 8. ನಿಶ್ಶಸ್ತ್ರೀಕರಣ ಮತ್ತು ಶಸ್ತ್ರಾಸ್ತ್ರಗಳ ನಿಯಂತ್ರಣ.

**ಮುಖ್ಯ ಅಂಶಗಳು :**

1. ಭಾರತದ ಅಣುಕರಡು ಬೆದರಿಕೆಯ ತಂತ್ರವಾಗಿ ಅಣ್ವಸ್ತ್ರಗಳನ್ನು ಬಳಸಿಕೊಳ್ಳುವ ಮೂಲಕ ಭದ್ರತೆಯನ್ನು ಕಾಪಾಡಿಕೊಳ್ಳುವುದನ್ನು ಆಧರಿಸಿದೆ.

2. ಭಾರತದ ಅಣ್ವಸ್ತ್ರಗಳು ಉತ್ತಮಮಟ್ಟದಾಗಿರಬೇಕು. ಪರಿಣಾಮಕಾರಿಯಾಗಿರುವುದಲ್ಲದೆ ಬಾಳಿಕೆ ಬರುವಂತಹದಾಗಿರಬೇಕು. ಅಣ್ವಸ್ತ್ರಗಳ ಪಡೆಯ ಗಾತ್ರವನ್ನು ಇಂತಿಷ್ಟೆ ಎಂದು ನಿರ್ಧಿಷ್ಟಗೊಳಿಸಲಾಗುವುದಿಲ್ಲ. ಅದರ ರಚನೆಯನ್ನು ಬದಲಾಗುವ ಭದ್ರತೆಯ ವಾತಾವರಣ (ವೈರಿಗಳ ಅಸ್ತ್ರ ವಿನ್ಯಾಸದ ಬದಲಾವಣೆಯಂತಹದು) ಭದ್ರತೆಯ ಅಗತ್ಯ (ಸರ್ಕಾರದ ಉಚ್ಚವರ್ಗದವರು ತೀರ್ಮಾನಿಸಿದಂತೆ) ಮತ್ತು ತಂತ್ರ ಜ್ಞಾನದ ಅಭಿವೃದ್ಧಿಗನುಗುಣವಾಗಿ ಕ್ರಿಯಾತ್ಮಕವಾಗಿ, ಬದಲಾವಣೆಗೆ ಅನುಕೂಲವಾಗುವಂತೆ ಇಡಲಾಗುವುದು.

3. ಭಾರತದ ಅಣುಸಾಮರ್ಥ್ಯವು ಯಾವುದೇ ದೇಶದ ಅಣ್ವಸ್ತ್ರಗಳನ್ನು ಹಿಮ್ಮೆಟ್ಟಿಸುವಂತಿರಬೇಕು.

4. ಭಾರತವು ಭೂಮಿ, ವಾಯು ಮತ್ತು ಸಮುದ್ರ ಮೂರರಲ್ಲೂ ಅಣ್ವಸ್ತ್ರಗಳನ್ನು ನೆಲೆಗೊಳಿಸುವುದಕ್ಕೆ ಪ್ರಯತ್ನಿಸುವುದು ಮತ್ತು ಅವಶ್ಯಕತೆಗಿಂತ ಹೆಚ್ಚಿನ ವಿವಿಧ ವ್ಯವಸ್ಥೆಗಳನ್ನು ಹೊಂದುವುದು.

5. ಭಾರತವು ಮೊದಲು ಅಣ್ವಸ್ತ್ರಗಳನ್ನು ಪ್ರಯೋಗಿಸದು, ಆದರೆ ಕ್ಷಿಪ್ರವಾಗಿ ವೈರಿಗೆ ಆಘಾತಕಾರಿ ತಿರುಗೇಟು ನೀಡಲು ಸಿದ್ಧವಾಗಿರುವುದು.

6. ಅಣ್ವಸ್ತ್ರ ಪಡೆಯು ರಾಜಕೀಯ ಕೇಂದ್ರವಾದ ಪ್ರಧಾನ ಮಂತ್ರಿಗಳ ನಿಯಂತ್ರಣದಲ್ಲಿರುವುದಾದರೂ ಸಂಖ್ಯೆಯನ್ನು ಹೆಚ್ಚಿಸುವ ಚಲನಶೀಲ ಗುಣವನ್ನು ಹೊಂದಿರುತ್ತದೆ.

7. ಶಸ್ತ್ರಾಸ್ತ್ರಗಳ ಸುರಕ್ಷತೆ ಮತ್ತು ಭದ್ರತೆಗೆ ಹೆಚ್ಚಿನ ಪ್ರಾಮುಖ್ಯತೆ ನೀಡಲಾಗುವುದು. ಅಣ್ವಸ್ತ್ರಗಳ ನಾಶ, ಕಳುವು, ಅಕ್ರಮ ಉಪಯೋಗವನ್ನು ತಡೆಯಲು ಎಲ್ಲಾ ಎಚ್ಚರಿಕೆಗಳನ್ನು ತೆಗೆದುಕೊಳ್ಳಲಾಗುವುದು. (ಹೇಗೆ ಎಂಬುದನ್ನು ಕರಡಿನಲ್ಲಿ ತಿಳಿಸಿಲ್ಲ)

8. ಅಣ್ವಸ್ತ್ರ ಮತ್ತು ಅಣುಸಂಬಂಧಿ ಕ್ಷೇತ್ರದಲ್ಲಿನ ಸಂಶೋಧನೆ ಹುತ್ತು ಅಭಿವೃದ್ಧಿ ಸಾಧ್ಯತೆ ಅಥವಾ ಚಟುವಟಿಕೆಗಳ ಮೇಲಿನ ಯಾವುದೇ ರೀತಿಯ ನಿರ್ಬಂಧವನ್ನು ಭಾರತ ಒಪ್ಪಿಕೊಳ್ಳುವುದಿಲ್ಲ.

9. ಅಣ್ವಸ್ತ್ರ ರಾಷ್ಟ್ರಗಳ ವಿರುದ್ಧ, ಅಣ್ವಸ್ತ್ರವನ್ನು ಮೊದಲಿಗೆ ಪ್ರಯೋಗಿಸುವುದಿಲ್ಲವೆಂಬ ಮತ್ತು ಅಣ್ವಸ್ತ್ರಹೊಂದಿಲ್ಲದ, ಅಣ್ವಸ್ತ್ರ ರಾಷ್ಟ್ರಗಳ ಮೈತ್ರಿಕೂಟದಲಿಲ್ಲದ ರಾಷ್ಟ್ರಗಳ ಮೇಲೆ ಅಣ್ವಸ್ತ್ರ ಪ್ರಯೋಗಿಸುದಿಲ್ಲವೆಂದು ಭಾರತವು ಆಶ್ವಾಸನೆ ನೀಡುತ್ತವೆ.

10. ಭಾರತವು ಶಸ್ತ್ರಾಸ್ತ್ರ ನಿಯಂತ್ರಣ ವಿಧಾನಗಳಿಗೆ ಪ್ರಯತ್ನಿಸುವುದಲ್ಲದೆ ಸಂಪೂರ್ಣ ಜಾಗತಿಕ ನಿಶ್ಶಸ್ತ್ರೀಕರಣದ ಗುರಿಯನ್ನು ನಂಬುತ್ತದೆ ಮತ್ತು ಅದಕ್ಕಾಗಿ ಪ್ರಯತ್ನ ಪಡುತ್ತದೆ.

ಭಾರತದ ಅಣುಕರಡಿನ ಮುಖ್ಯ ದೋಷವೆಂದರೆ ಬೆದರಿಕೆಯ ತಂತ್ರದ ಮೂಲಕ ಭದ್ರತೆಯನ್ನು ಕಾಯ್ದುಕೊಳ್ಳುವುದು. ಇದು ಜಗತ್ತಿನ ಎಲ್ಲಾ ಅಣುನೀತಿಯ ಮೂಲಭೂತ ದೋಷವೂ ಹೌದು. ಇದೆಂತಹ ಮೂರ್ಖತನದ್ದು ಎಂಬುದನ್ನು ಜಗತ್ತಿನಾದ್ಯಂತ ಅಣುಸ್ಥಾವರಗಳಲ್ಲಿ ನಡೆದಿರುವ ಅಪಘಾತಗಳನ್ನು ಗಮನಿಸಿದರೆ ತಿಳಿಯುತ್ತದೆ. ಯಾವ ಅಣ್ವಸ್ತ್ರಗಳ ಮೂಲಕ ಬೆದರಿಕೆಯೊಡ್ಡಬೇಕೆನ್ನುತ್ತಾರೂ ಆ ಅಣ್ವಸ್ತ್ರಗಳ ತಯಾರಿಕೆಯು ಮೂಲದ ಹಂತದದಿಂದಲೂ ಅಪಾಯಕಾರಿ ಎಂಬುದು ಸ್ಪಷ್ಟವಾಗಿ ಬೆಳಕಿಗೆ ಬಂದಿದೆ. ಹಿರೋಶಿಯಾ, ನಾಗಾಸಾಕಿ, ಚೆರ್ನೋಬಿಲ್ ದುರಂತಗಳು ಸುಲಭವಾಗಿ ಮಾಸಿ ಹೋಗುವಂತಹುದಲ್ಲ.

ಕರಡಿನಲ್ಲಿ ತಾನು ಮೊದಲಿಗೆ ಅಣ್ವಸ್ತ್ರ ಪ್ರಯೋಗಿಸುವುದಿಲ್ಲವೆಂದು, ಆಕ್ರಮಣಕ್ಕೆ ಪ್ರತಿಯಾಗಿ ಅಣ್ವಸ್ತ್ರ ಪ್ರಯೋಗಿಸುವುದೆಂದು ಹೇಳಲಾಗಿದೆ. ಪ್ರತ್ಯಾಕ್ರಮಣದ ಪ್ರಶ್ನೆ ಬರುವುದು ಬೆದರಿಕೆಯ ತಂತ್ರ ಕೈಕೊಟ್ಟಾಗಲೆ. ಆದರೆ ಬೆದರಿಕೆ ತಂತ್ರದ ಮೂಲಭೂತ ದ್ವಂದ್ವವನ್ನೇ ಕರಡು ಒಪ್ಪಿಕೊಳ್ಳಲು ಸೋತಿದೆ. ಮತ್ತು ಕರಡಿನಲ್ಲಿ ಬೆದರಿಕೆ ತಂತ್ರ ವಿಫಲವಾದಾಗ ಭದ್ರತೆಯೇ ಶಾಶ್ವತವಾಗಿ ಕುಸಿದು ಬೀಳಬಹುದೆಂಬುದನ್ನು ಮುಚ್ಚಿ ಹಾಕಲಾಗಿದೆ.

ಭಾರತದ ವಿರುದ್ಧ ಯಾವುದೇ ದೇಶದ ಅಣ್ವಸ್ತ್ರ ಉಪಯೋಗ ಅಥವಾ ಉಪಯೋಗದ ಭೀತಿಯನ್ನು ಯಶಸ್ವಿ ಪ್ರತ್ಯಾಕ್ರಮಣದ ಮೂಲಕ ಎದುರಿಸಲಾಗುವುದೆಂದು ಹೇಳಲಾಗಿದೆ. ಹೀಗೆ ಹೇಳುವ ಮೂಲಕ ಅಣ್ವಸ್ತ್ರಗಳನ್ನು ಅನಿವಾರ್ಯಗೊಳಿಸಿದೆ. ಯಾವುದೇ ದೇಶವೆಂದರೆ ಇಲ್ಲಿ ಮುಖ್ಯವಾಗಿ ಪ್ರಮುಖ ಅಣ್ವಸ್ತ್ರ ದೇಶಗಳು. ಇದಕ್ಕೆ ಶಸ್ತ್ರಾಸ್ತ್ರಗಳ ಬೃಹತ್ ಭಂಡಾರವೆ ಬೇಕಾಗುವುದಲ್ಲದೆ, ಅಣ್ವಸ್ತ್ರದೇಶಗಳ ನಡುವೆ ಶಸ್ತ್ರಾಸ್ತ್ರಗಳ ಸ್ಪರ್ಧೆಗೆ ಕಾರಣವಾಗುವುದು. ಇದೊಂದು ರಾಜಕೀಯವಾಗಿ, ಆರ್ಥಿಕವಾಗಿ, ಸಾಮಾಜಿಕವಾಗಿ ಆತ್ಮಹತ್ಯಾಕಾರಿಯಾದ ನೀತಿ ಮತ್ತು ಅಣ್ವಸ್ತ್ರಗಳಿಲ್ಲದ ಅಣ್ವಸ್ತ್ರ ದೇಶಗಳ ಮೈತ್ರಿಕೂಟದಲ್ಲಿಲ್ಲದ ರಾಷ್ಟ್ರಗಳ ಮೇಲೆ ಅಣ್ವಸ್ತ್ರ ಪ್ರಯೋಗಿಸುವುದಿಲ್ಲವೆಂಬ ಆಶ್ವಾಸನೆಯನ್ನು ಕರಡು ನೀಡಿದೆ. ಅಂದರೆ ಇದು ಜಪಾನ್‌ನಂತಹ ರಾಷ್ಟ್ರಗಳ ಮೇಲೆ (ಜಪಾನ್ ಅಣ್ವಸ್ತ್ರ ದೇಶವಲ್ಲ ಆದರೆ ನ್ಯಾಟೊ (NATO-North atlantic treaty organisation)ದ ಸದಸ್ಯ ರಾಷ್ಟ್ರ) ಮೊದಲು ಪ್ರಯೋಗಿಸುವುದಿಲ್ಲವೆಂಬ ಆಶ್ವಾಸನೆ ನೀಡುತ್ತದೆಯೇ ಹೊರತು ಬಳಸುವುದೇ ಇಲ್ಲವೆಂಬ ಆಶ್ವಾಸನೆ ನೀಡುವುದಿಲ್ಲ. ಅಣ್ವಸ್ತ್ರ ದೇಶದೊಂದಿಗಿನ ಮೈತ್ರಿ ಹೊಂದಿದ್ದರೂ ಅಣ್ವಸ್ತ್ರವಿಲ್ಲದ ಯಾವುದೇ ದೇಶದ ಮೇಲೂ ಅಣ್ವಸ್ತ್ರ ಪ್ರಯೋಗಿಸುವುದಿಲ್ಲವೆಂಬ ಚೈನಾದ ನಿಲುವು ಪ್ರಶ್ನಾರ್ಹವಾಗಿರುವಾಗ ಭಾರತದ ನಿಲುವು ಇನ್ನು ಹೆಚ್ಚು ಆಕ್ಷೇಪಾರ್ಹ.

ಕನಿಷ್ಟ ಉಪಯೋಗಕ್ಕೆ ಸಂಬಂಧಿಸಿದಂತೆ ನಿಜಕ್ಕೂ ಹೇಳಿರುವುದು ಗರಿಷ್ಠ ಉಪಯೋಗದ ಬಗ್ಗೆ. ಮೂರೂ ವಾತಾವರಣ (ಭೂಮಿ, ವಾಯು, ಸಮುದ್ರ)ದಲ್ಲಿ ಅಣ್ವಸ್ತ್ರಗಳನ್ನು ಅಳವಡಿಸಿ ಇಡುವುದರಲ್ಲಿ ಈಗಾಗಲೆ ಬ್ರಿಟನ್ ಒಂದನ್ನಷ್ಟೇ ಆಯ್ಕೆ ಮಾಡಿಕೊಂಡಿದೆ. ಫ್ರಾನ್ಸ್ ದೇಶವೂ ಇದೇ ಹಾದಿಯಲ್ಲಿದೆ. NATO ಒಕ್ಕೂಟವೂ ಸಹ ಕೆಲವು ಸಬ್‌ಮೆರಿನ್‌ಗಳಲ್ಲಿ ಅಣ್ವಸ್ತ್ರಗಳ ಅಳವಡಿಸಿರುವುದನ್ನು ಹೊರತುಪಡಿಸಿ ಭೂ ವಾತಾವರಣದಲ್ಲಿ ಅಳವಡಿಸಿರುವ ಅಣ್ವಸ್ತ್ರಗಳನ್ನು ಕಮ್ಮಿ ಮಾಡುತ್ತಿವೆ. ಈ ಹಿನ್ನಲೆಯಲ್ಲಿ ಭಾರತ ಮೂರನ್ನು ಕನಿಷ್ಠ ಬೆದರಿಕೆಯ ಭಾಗವಾಗಿ ಉಳಿಸಿಕೊಳ್ಳುತ್ತೇನೆಂದು ಹೇಳುತ್ತಿರುವುದು ವಿಲಕ್ಷಣವಾಗಿದೆ. ಕರಡು ಹೇಳುವ ಸಮುದ್ರ ಆಧರಿಸಿದ ಎಂಬುದು ಸಬ್‌ಮೆರಿನ್‌ಗಳಲ್ಲಿ ಅಳವಡಿಸುವ ಅಣ್ವಸ್ತ್ರಗಳಿಗಷ್ಟೇ ಸೀಮಿತಗೊಳ್ಳುವುದಿಲ್ಲ. ಹೀಗೆ ಹೇಳುವ ಮೂಲಕ 'ಬೆದರಿಕೆ ತಂತ್ರಕ್ಕೆ' ಅನಗತ್ಯವಾದ ಟ್ಯಾಕ್ಟಿಕಲ್ ಅಣ್ವಸ್ತ್ರಗಳು (ಯುದ್ಧದಲ್ಲಿ ಬಳಸುವ ಅಣ್ವಸ್ತ್ರಗಳಲ್ಲಿ ಮೂರು ರೀತಿ ಇವೆ. ಲಾಂಗ್ ರೇಂಜ್ ಅಸ್ತ್ರಗಳು - ಇವುಗಳನ್ನು ಒಂದು ಖಂಡದಿಂದ ಇನ್ನೊಂದು ಖಂಡಕ್ಕೆ ಉಡಾಯಿಸಬಹುದು. ಮಿಡಿಯಂ ರೇಂಜ್ - ಇವು ಅಗ್ನಿ

ಪೃಥ್ವಿಯಂತಹ ಕ್ಷಿಪಣಿಯಂತಹವು. ಒಂದು ದೇಶ ಅಕ್ಕಪಕ್ಕದ ದೇಶಗಳ ಮೇಲೆ ಸಿಡಿಸಬಹುದು. ಶಾರ್ಟ್‌ರೇಂಜ್ ಅಥವಾ ಟ್ಯಾಕ್ಟಿಕಲ್ ಅಸ್ತ್ರಗಳು - ಹಲವಾರು ಮೀಟರ್‌ಗಳವರೆಗೆ ಸಿಡಿಸುವಂತಹವು). ಉಪಯೋಗವನ್ನೂ ಸಹ ಕರಡು ಒಳಗೊಂಡಿದೆ.

ಪ್ರತ್ಯಾಕ್ರಮಣ ಕುರಿತಂತೆ ಕರಡು ಎಲ್ಲಾ ರೀತಿಯ ಶಸ್ತ್ರಾಸ್ತ್ರಗಳ (ಅಣು, ಜೈವಿಕ, ರಾಸಾಯನಿಕ) ಉಪಯೋಗವನ್ನು ಎಲ್ಲ ಕಾಲದಲ್ಲೂ ಸಿದ್ಧವಿರುವ ಶಸ್ತ್ರಾಸ್ತ್ರಗಳನ್ನು ಒಳಗೊಳ್ಳುತ್ತದೆ. ಪ್ರತ್ಯಾಕ್ರಮಣವನ್ನು ನಿರ್ಧರಿಸುವವರಾರು? ಶಸ್ತ್ರಾಸ್ತ್ರಗಳನ್ನು ಪ್ರಯೋಗಿಸಲು ಸೂಚನೆ ನೀಡುವವರಾರು? ಇಂತಹವನ್ನು ನಿರ್ಧರಿಸುವುದು ಕರಡಿನಲ್ಲಿ ತಿಳಿಸಿರುವಂತೆ ಪ್ರಧಾನ ಮಂತ್ರಿಯೊಬ್ಬರಿಂದ ಸಾಧ್ಯವಾಗುವುದಿಲ್ಲ ನಿರ್ಧರಿಸಲು ಒಂದು ಗುಂಪೆ ಬೇಕಾಗುತ್ತದೆ. ಇದರಿಂದ ಕೇಂದ್ರಿಕೃತ ನಿಯಂತ್ರಣವು ಬಲಹೀನಗೊಳ್ಳುತ್ತದೆ. ಇದು ಹೆಚ್ಚು ಅಪಾಯಕಾರಿ.

ಕರಡು ತಿಳಿಸಿರುವ ಪ್ರತ್ಯಾಕ್ರಮಣವು -ವೈರಿ ಆಕ್ರಮಣದ ಎಚ್ಚರಿಕೆ ಸಿಕ್ಕಾಗ ನಡೆಸುವ ಆಕ್ರಮಣ, ಆಕ್ರಮಣ ನಡೆದ ನಂತರದ ಪ್ರತ್ಯಾಕ್ರಮಣ, ಆಕ್ರಮಣ ನಡೆದ ತತ್‌ಕ್ಷಣ ನಡೆಸುವ ಪ್ರತ್ಯಾಕ್ರಮಣವನ್ನು ಒಳಗೊಳ್ಳುತ್ತವೆ. ಈ ಎಲ್ಲಾ ಸಂದರ್ಭಗಳಲ್ಲೂ ತಾಂತ್ರಿಕವಾಗಿ ಸಮರ್ಥವಾದ ಅಣ್ವಸ್ತ್ರಗಳು, ಸಮರ್ಥ ಎಚ್ಚರಿಕೆಯ ವ್ಯವಸ್ಥೆ, ಆಕ್ರಮಣಕ್ಕೆ ಸಿದ್ಧವಾಗಿರುವ ಶಸ್ತ್ರಾಸ್ತ್ರಗಳು, ಇವೆಲ್ಲದರ ನಿರ್ವಹಣೆಗೆ ನಿಯಮಿತವಾದ ತರಬೇತಿ ಬೇಕಾಗುತ್ತದೆ. ಇಂತಹ ವ್ಯವಸ್ಥೆ ದುಬಾರಿಯಷ್ಟೇ ಅಲ್ಲ ಪ್ರಚೋದನಾಕಾರಿಯೂ ಹೌದು. ಅಣ್ವಸ್ತ್ರಗಳ ಸಂಶೋಧನೆ, ಅಭಿವೃದ್ಧಿ ಕುರಿತು ಕರಡಿನಲ್ಲಿ ಹೇಳಿರುವುದು, ಅದು ಹೇಳುವ ಕನಿಷ್ಠ ಬೆದರಿಕೆ ವ್ಯವಸ್ಥೆಗೆ ವಿರೋಧಾಭಾಸವಾಗಿದೆ. ಅಲ್ಲದೆ ಶಸ್ತ್ರಾಸ್ತ್ರ ಸ್ಪರ್ಧೆಯ ಅನಿವಾರ್ಯತೆಯನ್ನು ಗುಪ್ತವಾಗಿ ಒಪ್ಪಿಕೊಂಡಿರುವುದನ್ನು ಸ್ಪಷ್ಟಪಡಿಸುತ್ತದೆ.

**ವೆಚ್ಚ**

ಕರಡಿನಲ್ಲಿ ಹೇಳಿರುವ ಅಣ್ವಸ್ತ್ರ ಪಡೆಗೆ ತಗುಲುವ ವೆಚ್ಚವೆಷ್ಟೆಂಬುದರ ಕುರಿತು ಕರಡಿನಲ್ಲಿ ಚರ್ಚಿಸಿಯೇ ಇಲ್ಲ.

ಯಶಸ್ವಿ ಪ್ರತ್ಯಾಕ್ರಮಣ, ಅಣ್ವಸ್ತ್ರಗಳ ಕುರಿತು ಸಂಶೋಧನೆ, ಅಭಿವೃದ್ಧಿ, ಭೂ, ವಾಯು, ಸಮುದ್ರದಲ್ಲಿ ಅವುಗಳ ಅಳವಡಿಕೆ ಇವೆಲ್ಲಕ್ಕೂ ತಗುಲುವ ವೆಚ್ಚ ಸಾಮಾನ್ಯರ ಊಹೆಗೂ ನಿಲುಕದ್ದು. ಕರಡು ಸಮಿತಿಯ ಸದಸ್ಯರೊಬ್ಬರ ಅಂದಾಜಿನಂತೆ ಕನಿಷ್ಠ! ವ್ಯವಸ್ಥೆಗೆ ತಗುಲುವ ವೆಚ್ಚ 70,000 ರಿಂದ 700,000 ಕೋಟಿ ರೂ.ಗಳು ಅಥವಾ 15 ರಿಂದ 150 ಬಿಲಿಯನ್ ಡಾಲರ್‌ಗಳು. ಹಿಂದಿನ ಒಂದು ಅಂದಾಜಿನಂತೆ 100 ಯುದ್ಧಾಸ್ತ್ರಗಳಿಗೆ ಆಗುವ ಖರ್ಚು 40,000 ರಿಂದ 50,000 ಕೋಟಿ. ಇನ್ನೂ ಕರಡಿನಲ್ಲಿ ತಿಳಿಸಿರುವ 400ಕ್ಕೂ ಹೆಚ್ಚಿನ ಯುದ್ಧಾಸ್ತ್ರಗಳಿಗೆ ತಗಲುವ ವೆಚ್ಚ 1,60,000 ರಿಂದ 200000 ಕೋಟಿ! ಅಮೆರಿಕ ದೇಶವು ಅಣ್ವಸ್ತ್ರಗಳಿಗೆಂದು ಮಾಡಿರುವ ಖರ್ಚು 5.5 ಟ್ರಿಲಿಯನ್ ಡಾಲರ್‌ಗಳು ಅಂದರೆ 55000 ಬಿಲಿಯನ್ ಡಾಲರ್‌ಗಳು. 1 ಬಿಲಿಯನ್ ಎಂದರೆ ಲಕ್ಷಕೋಟಿ! ಚೈನಾ ದೇಶದ ಕನಿಷ್ಠ ವ್ಯವಸ್ಥೆಗೆ ತಗುಲಿರುವ ವೆಚ್ಚ 100 ಬಿಲಿಯನ್ ಡಾಲರ್ ಅಥವಾ 450000 ಕೋಟಿ. ಈ ಆಧಾರದ ಮೇಲೆ ಹೇಳುವುದಾದರೆ ಭಾರತದ ಕನಿಷ್ಠ ವ್ಯವಸ್ಥೆ ಚೈನಾ ದೇಶಕ್ಕಿಂತ ಕಡಿಮೆ ಖರ್ಚಿನದ್ದು ಎಂದರೆ 70,000 ಕೋಟಿ. ಅಂದರೆ 7ರ ಮುಂದೆ ಕೇವಲ 11 ಸೊನ್ನೆಗಳು. ದೇಶಪ್ರೇಮದ ಎದುರಿನಲ್ಲಿ 11 ಸೊನ್ನೆಗಳೇನು ಮಹಾ? ಇದಲ್ಲದೆ ಶಸ್ತ್ರಾಸ್ತ್ರಗಳ ನಿರ್ವಹಣೆಗೆ ಅವುಗಳ ತಯಾರಿಕೆಯ ಖರ್ಚಿನ 30 ರಿಂದ 50% ಭಾಗವನ್ನು ವ್ಯಯಿಸಬೇಕಾಗುತ್ತದೆ.

**ಅಣುಕರಡು ಪ್ರತಿನಿಧಿಸುವುದು ಏನನ್ನು?**

ಭಾರತದ ಅಣುನೀತಿ ಕರಡು ಇತರ ದೇಶಗಳ ದುಷ್ಟ ಕರಡಿನಂತೆಯೇ ಇದೆ. ಕರಡು ದುಸ್ಸಾಹಸ ಪೂರ್ಣವಾಗಿದ್ದು, ಗಂಡಾಂತರಕಾರಿಯಾಗಿದೆ. ಕಡಿಮೆ ವೆಚ್ಚದ ಕನಿಷ್ಟ ವ್ಯವಸ್ಥೆ ಎಂದು ಹೇಳಿರುವುದು ಕನಿಷ್ಟತೆ ಕುರಿತು ಮಾಡಿರುವ ಜೋಕ್‌ನಂತಿದೆ. ಇದನ್ನು ಜಾರಿಗೊಳಿಸಿದರೆ ಭಾರತ ತನ್ನನ್ನೇ ಅಣುವೆಂಬ ಭೀಕರ ಪ್ರಪಾತಕ್ಕೆ ತಳ್ಳಿಕೊಂಡಂತೆ. ಈ ಕರಡು ಭದ್ರತೆಗಿಂತ ಪ್ರತಿಷ್ಠೆಯ ಸಂಕೇತವಾಗಿವೆ. ಪ್ರತಿಷ್ಠೆಗಾಗಿ ದೇಶದ ಹಿತವನ್ನೆ ಕಡೆಗಣಿಸಿ - ಪೌರುಷ ಮೆರೆಯುವುದಾಗಿದೆ. -ಪೊಳ್ಳು ರಾಷ್ಟ್ರಾಭಿಮಾನದ ಹೆಸರಿನಲ್ಲಿ ವಿಧ್ವಂಸಕಾರಿ ಶಸ್ತ್ರಾಸ್ತ್ರಗಳನ್ನು ಸಮರ್ಥಿಸಿಕೊಳ್ಳುವುದಾಗಿದೆ.

ಅಣ್ವಸ್ತ್ರಗಳ ಪಡೆಯನ್ನೇ ನಿರ್ಮಿಸಲು ಅತ್ಯುತ್ಸಾಹ ತೋರಿಸುತ್ತಾ ನಿಶ್ಶಸ್ತ್ರೀಕರಣಕ್ಕೂ ಪ್ರಯತ್ನಿಸುವುದಾಗಿ ಹೇಳಿರುವುದು ಅಸಂಬದ್ಧವಾಗಿದೆ. ಭಾರತವು ನಿರಂತರವಾಗಿ ಜಾಗತಿಕ ನಿಶ್ಶಸ್ತ್ರೀಕರಣ ಕಾರ್ಯಕ್ರಮಕ್ಕೆ ಪ್ರಯತ್ನಿಸಬೇಕು ಇಲ್ಲ ಧ್ವಂಸಕಾರಿ ಅಣ್ವಸ್ತ್ರಗಳ ಸ್ಪರ್ಧೆಗೆ ಸೇರುವಂತಹ ಎಚ್ಚರಗೇಡಿ ನಿಲುವನ್ನು ತೆಗೆದುಕೊಳ್ಳಬೇಕು. ಎರಡಕ್ಕೂ ಜೊತೆ ಜೊತೆಯಲ್ಲೇ ಪ್ರಯತ್ನಿಸುತ್ತೇನೆಂದು ಹೇಳುವುದು ನಾಡಿನ ಜನತೆಯನ್ನಷ್ಟೇ ಅಲ್ಲ ಇಡಿ ಪ್ರಪಂಚವನ್ನೇ ಹಾದಿ ತಪ್ಪಿಸುವಂತಾಗಿದೆ.

*ಕೃಪೆ : ಅಚಿನ್ ವನಾಯಕ್ ಅವರು MIND (Movement in India for Nuclear Disarmment) ಪರವಾಗಿ ಪ್ರಕಟಿಸಿರುವ ಲೇಖನ.*

*ಕನ್ನಡಕ್ಕೆ : ಸರಸ್ವತಿ ದು.*

# ಭದ್ರತೆಗೆ ಅಣ್ವಾಸ್ತ್ರಗಳು ಅನಿವಾರ್ಯವಲ್ಲ

ಅಣ್ವಸ್ತ್ರ ನಿಶ್ಯಸ್ತ್ರೀಕರಣದ ಚಳುವಳಿಯಲ್ಲಿ ಸಕ್ರಿಯವಾಗಿ ತೊಡಗಿಸಿಕೊಂಡಿರುವ ಪ್ರಫುಲ್ ಬಿದ್ವಾಯಿ ಮತ್ತು ಅಚಿನ್ ವನಿಯಕ್ ಅವರು ಇತ್ತೀಚೆಗೆ ಬೆಂಗಳೂರಿಗೆ ಬಂದಿದ್ದರು. ಸಿ.ಐ.ಡಿ. (Centre for - infermation & Documentation) ಮತ್ತು ಆಕ್ಸ್‌ಫರ್ಡ್ ಯೂನಿವರ್ಸಿಟಿ ಪ್ರೆಸ್‌ನವರು ಜಂಟಿಯಾಗಿ ಏರ್ಪಡಿಸಿದ್ದ ಸಭೆಯಲ್ಲಿ ಹಾಗೂ ಸೈನ್ಸ್ ಫಾರ್ ಸೊಸೈಟಿಯವರು ಏರ್ಪಡಿಸಿದ್ದ ಸಭೆಯಲ್ಲಿ ಅವರುಗಳು ಮಾತನಾಡಿದ್ದನ್ನು ಸಂಕ್ಷಿಪ್ತವಾಗಿ ಇಲ್ಲಿ ಪ್ರಕಟಿಸಿದ್ದೇವೆ.

ಪ್ರಫುಲ್ - ಭದ್ರತೆ ಮತ್ತು ದೇಶ ಪ್ರೇಮದ ಹೆಸರಿನಲ್ಲಿ ಅಪಾಯಕಾರಿ ಅಣ್ವಸ್ತ್ರಗಳನ್ನು ಸಮರ್ಥಿಸಿಕೊಳ್ಳುತ್ತಿರುವುದು ವಿಪರ್ಯಾಸವಾಗಿದೆ. ಅಣ್ವಸ್ತ್ರಗಳು ಯುದ್ಧಾಸ್ತ್ರವಲ್ಲ. ಅವು ಜೀವಕುಲವನ್ನೇ ನಾಶಪಡಿಸುವ ಮಾರಕಾಸ್ತ್ರಗಳು. ಯುರೇನಿಯಂ ಗಣಿಗಾರಿಕೆಯಿಂದ ಹಿಡಿದು ಅಣ್ವಸ್ತ್ರ ನಿರ್ಮಿಸುವವರೆಗಿನ ಪ್ರತಿ ಹಂತವೂ ಅಪಾಯಕಾರಿಯಾದುದು. ಸ್ಫೋಟವು ಉಂಟು ಮಾಡುವ ಶಾಖ, ವಿಕಿರಣ ಉಂಟುಮಾಡುವ ಅಪಾಯಗಳು ಹಾನಿಕಾರಕ, ಸಾಮಾನ್ಯವಾದ 100 ಅಣ್ವಸ್ತ್ರಗಳನ್ನು ತಯಾರಿಸಲು 40 ರಿಂದ 50 ಸಾವಿರ ಕೋಟಿ ಖರ್ಚಾಗುತ್ತದೆ. ಇದು ದೇಶವನ್ನು ಸಾಮಾಜಿಕವಾಗಿ, ಆರ್ಥಿಕವಾಗಿ ದಿವಾಳಿ ಎಬ್ಬಿಸುತ್ತದೆ. ಇತ್ತೀಚಿನ ಕಾರ್ಗಿಲ್ ಯುದ್ಧಕ್ಕೆ ಮಾಡಿರುವ ಖರ್ಚು 10 ಸಾವಿರ ಕೋಟಿ. ಸುಮಾರು 2000 ಜನಗಳು ಯುದ್ಧದಲ್ಲಿ ಸತ್ತಿದ್ದಾರೆ. ಭಾರತ ಮತ್ತು ಪಾಕಿಸ್ತಾನ 3 ರಿಂದ 8 ನಿಮಿಷ ಅಣ್ವಸ್ತ್ರ ಸಿಡಿಸಲು 7500 ಕೋಟಿ ರೂ.ಗಳನ್ನು ಖರ್ಚು ಮಾಡಿವೆ. ಈ ಹುಚ್ಚು ಅಣ್ವಸ್ತ್ರೀಕರಣವನ್ನು ತಡೆಯಬೇಕು. ಈಗಾಗಲೆ ಅನೇಕ ದೇಶಗಳು ಅಣು ಅಪಾಯವನ್ನು ಅರಿತು ನಿಶ್ಯಸ್ತ್ರೀಕರಣಕ್ಕೆ ಪ್ರಯತ್ನಿಸುತ್ತಿವೆ. ಅಣುಶಕ್ತಿಯ ಉಪಯೋಗವನ್ನು ಅಣ್ವಸ್ತ್ರ ಪ್ರಯೋಗ, ಪರೀಕ್ಷೆಗಳನ್ನು ಕಡಿಮೆ ಮಾಡಲಾಗುತ್ತಿದೆ. ಅಣ್ವಸ್ತ್ರಗಳ ನಿಶ್ಯಸ್ತ್ರೀಕರಣಕ್ಕೆ C.T.B.T. ಒಪ್ಪಂದವು ಒಂದು ದಾರಿಯಾಗಿದ್ದು, ಭಾರತವೂ ಒಪ್ಪಂದಕ್ಕೆ ಸಹಿಹಾಕುವ ಮೂಲಕ ಜಾಗತೀಕ ನಿಶ್ಯಸ್ತ್ರೀಕರಣಕ್ಕೆ ಪ್ರಯತ್ನಿಸಬೇಕು.

ಅಚಿನ್ - ಯಾವ ಭದ್ರತೆಯ ಕಾರಣಕ್ಕೇ ಪೋಕ್ರಾನ್ ಪರೀಕ್ಷಾರ್ಥ ಸ್ಫೋಟಗಳನ್ನು ಸಮರ್ಥಿಸಿಕೊಳ್ಳಲಾಗಿತ್ತೊ ಅದಾದನಂತರ ಭದ್ರತಾ ವ್ಯವಸ್ಥೆ ಸೋತಿರುವುದನ್ನು ಕೆಲಘಟನೆಗಳು ಸಾಬೀತು ಪಡಿಸಿವೆ. ಕಾರ್ಗಿಲ್ ಯುದ್ಧ, ವಿಮಾನ ಅಪಹರಣ ಪ್ರಕರಣಗಳೇ ಅದಕ್ಕೆ ಸಾಕ್ಷಿ. ಭದ್ರತಾ ವ್ಯವಸ್ಥೆಗೆ ಅಣ್ವಾಸ್ತ್ರಗಳು ಅನಿವಾರ್ಯವಲ್ಲ. ಕ್ಯೂಬಾ, ವಿಯಾಟ್ನಾಂನಂತಹ ಪುಟ್ಟ ರಾಷ್ಟ್ರಗಳು ಅಮೆರಿಕಾದಂತ ದೈತ್ಯರಾಷ್ಟ್ರವನ್ನು ಮಣಿಸಿದ್ದು ಅಣ್ವಸ್ತ್ರಗಳಿಂದಲ್ಲ. ಚೆಚನ್ಯಾ, ಆಫಘಾನಿಸ್ತಾನಗಳು, ರಷ್ಯಾವನ್ನು ಎದುರಿಸಿದ್ದನ್ನು ಗಮನಿಸಿದಾಗಲೂ ಮೇಲಿನ ಅಂಶ ಸ್ಪಷ್ಟವಾಗುತ್ತದೆ. ದೇಶಾಭಿಮಾನದಂತಹ ಭಾವನಾತ್ಮಕ ವಿಷಯವನ್ನು ಅಣ್ವಸ್ತ್ರಗಳೊಂದಿಗೆ ತಳಕುಹಾಕುವುದು ಪ್ರತಿಷ್ಠೆ, ಅಧಿಕಾರದ ಹುಚ್ಚನ್ನು ಸ್ಪಷ್ಟಪಡಿಸುತ್ತದೆ. ನ್ಯೂಕ್ಲಿಯರ್ ಪ್ರಶ್ನೆಯನ್ನು ನೈತಿಕತೆಯ ಪ್ರಶ್ನೆಯಾಗಿ ನೋಡಬೇಕು: ಕ್ರೌರ್ಯವನ್ನು ಮೀರಿದ ಸೌಹಾರ್ದ ಬದುಕಿನ ಸಾಧ್ಯತೆಯನ್ನು ಸಾಧಿಸುವ ಶಕ್ತಿ ಮನುಷ್ಯ ಕುಲಕ್ಕಿದೆ.

ಎರಡೂ ಸಭೆಯ ನಂತರ ಆಸಕ್ತ ಸಂಘಟನೆಗಳು ಸೇರಿ ಮುಂದಿನ ಕಾರ್ಯಕ್ರಮದ ಬಗ್ಗೆ ಚರ್ಚಿಸಿದವು. ದೇಶದ ಹಲವೆಡೆ ಅಣ್ವಸ್ತ್ರ ವಿರೋಧಿ ಚಳುವಳಿಯು ತೀವ್ರಗೊಳ್ಳುತ್ತಿದ್ದು ಒಂದೆಡೆ ಬರಲು ಅದಕ್ಕೆ ಒಂದು ರಾಷ್ಟ್ರೀಯ ವೇದಿಕೆಯ ಅಗತ್ಯವಿರುವುದನ್ನು ಕುರಿತು ಪ್ರಫುಲ್ ಹಾಗು ಅಚಿನ್ ಹೇಳಿದರು. ಮೇ ತಿಂಗಳಿನಲ್ಲಿ ಅಣ್ವಸ್ತ್ರ ವಿರೋಧಿ ಸಂಘಟನೆಗಳ ಸಮಾವೇಶವನ್ನು ದೆಹಲಿಯಲ್ಲಿ ಮಾಡುವ ಆಲೋಚನೆ ಇದೆ ಎಂದು ತಿಳಿಸಿದರು. ಆ ನಿಟ್ಟಿನಲ್ಲಿ ಮುಂದುವರೆಯಲು ಇಲ್ಲಿನ ಆಸಕ್ತ ಅಣ್ವಸ್ತ್ರ ವಿರೋಧಿಸುವ ಸಂಘಟನೆಗಳನ್ನು ಸಂಪರ್ಕಿಸಿ, ಸಭೆ ಕರೆದು ಮುಂದಿನ ಕಾರ್ಯಕ್ರಮ ಕುರಿತು ಚರ್ಚೆ ಏರ್ಪಡಿಸುವ ಜವಾಬ್ದಾರಿಯನ್ನು ಸೈನ್ಸ್ ಫಾರ್ ಸೊಸೈಟಿ ಮತ್ತು ಸಿ.ಇ.ಡಿ.ಯವರು ತೆಗೆದುಕೊಂಡರು. ಸಭೆಯ ನಂತರ ಹಿರೋಶಿಮದ ಸತ್ಯ ಘಟನೆಯನ್ನು ಆಧರಿಸಿದ ರೆಕ್ಕೆಕಟ್ಟುವಿರಾ? ಎಂಬ ನಾಟಕವನ್ನು ಪ್ರದರ್ಶಿಸಲಾಯಿತು.

ಮುಂದಿನ ಕಾರ್ಯಕ್ರಮದ ಅಂಗವಾಗಿ ಸಿ.ಇ.ಡಿ.ಯಲ್ಲಿ ದಿನಾಂಕ 18-2-99ರಂದು ಸಭೆ ಕರೆಯಲಾಗಿತ್ತು. ದೆಹಲಿಯಲ್ಲಿ ನಡೆಸಬೇಕೆಂದಿರುವ ಸಮಾವೇಶದ ಸಿದ್ಧತಾ ಸಭೆಯನ್ನು ಮಾರ್ಚ್ ತಿಂಗಳ 26ರಂದು ನಾಗಪುರದಲ್ಲಿ ಕರೆಯಲಾಗಿರುವುದರ ಕುರಿತು ಚರ್ಚಿಸಲಾಯಿತು. ಸಭೆಯಲ್ಲಿ ಭಾಗವಹಿಸಲು ಇಚ್ಛಿಸುವವರು ಒಂದೆಡೆ ಸೇರಿ ಕರ್ನಾಟಕದ ಸಂದರ್ಭಕ್ಕೆ ಪ್ರಸ್ತುತವಾಗಿರುವ ಅಣ್ವಸ್ತ್ರ ಸಂಬಂಧಿ ವಿಷಯ ಕುರಿತು ಚರ್ಚಿಸಿ ನಾಗಪುರದ ಸಭೆಯಲ್ಲಿ ಮಂಡಿಸುವ ಅವಶ್ಯಕತೆ ಕುರಿತು ಮಾತನಾಡಲಾಯಿತು. ಅಲ್ಲದೆ ನಾಗಪುರದ ಸಭೆಗೆ ಸಂಬಂಧಿಸಿದ ಲಿಖಿತ ವಿವರಗಳನ್ನು ತರಿಸಿ ಹೆಚ್ಚಿನ ಜನರಿಗೆ ತಲುಪಿಸುವ ಅಗತ್ಯ ಇದೆ ಎಂದು ಅಭಿಪ್ರಾಯ ಪಡಲಾಯಿತು. ಆಸಕ್ತರು ಸಂಪರ್ಕಿಸಬೇಕಾದ ವಿಳಾಸ:

ಸಿ.ಇ.ಡಿ.
ನಂ. 7, 8ನೇ ಮೇನ್, 3ನೇ ಫೇಸ್,
ದೊಮ್ಮಲೂರು 2ನೇ ಹಂತ, ಬೆಂಗಳೂರು-71
ಫೋನ್ : 553377

# ಮಲಿನತೆಯ ಪರಿಕಲ್ಪನೆ

*ರಾಜೇಶ್ವರಿ ಹೆಚ್. ಎಸ್.*

ಅದೊಂದು ಸುಂದರವಾದ ದೊಡ್ಡ ಕೆರೆ. ಕಣ್ಣೋಟ ಹರಿಸಿದಷ್ಟು ಕೆರೆ ಬೆಳೆಯುತ್ತಾ ಹೋಗುತ್ತದೆ. ಒಂದು ಕಾಲದಲ್ಲಿ ಆ ಗ್ರಾಮದ ಜನರ ಜೀವನಾಡಿ ಈ ಕೆರೆ. ಬಟ್ಟೆ ಒಗೆಯಲು, ದನಗಳ ಮೈ ತೊಳೆಯಲು, ಕುಡಿಯುವ ನೀರಿಗಾಗಿ ಜನರು ಆ ಕೆರೆಯನ್ನೇ ಸಂಪೂರ್ಣವಾಗಿ ಆಶ್ರಯಿಸಿದ್ದರು. ಈಗ ಮನೆಯ ಬಾಗಿಲಿಗೆ ನಲ್ಲಿ ಬಂದಿರುವುದರಿಂದ ಕೆರೆಯ ನೀರನ್ನೂ ಜನರು ಕುಡಿಯುವದನ್ನು ಬಿಟ್ಟಿದ್ದಾರೆ.

ವಿಶಾಲವಾದ ಈ ಕೆರೆಯ ನೋಟ ನನ್ನ ಕಾಲನ್ನು ಅಲ್ಲಿಗೆ ಎಳೆಯಿತು. ಆದರೆ ಕೆರೆಯ ಬಳಿ ಹೋದಂತೆ ಹೆಜ್ಜೆ ಇಡುವುದೇ ಕಷ್ಟವಾಗತೊಡಗಿ ಲಾಂಗ್‌ಜಂಪ್ ಮಾಡುತ್ತಾ ಹೋಗ ಬೇಕಾಯಿತು. ಕೆರೆಯ ಹತ್ತಿರ ಹೋಗುತ್ತಿದ್ದಂತೆ ಗಬ್ಬುವಾಸನೆ ಯಿಂದ ಉಸಿರಾಡುವುದೇ ಕಷ್ಟವೆನಿಸತೊಡಗಿತು. ಮನುಷ್ಯರು ಮಾಡಿದ ಈ ಹೇಸಿಗೆಯ ವಾತಾವರಣದಲ್ಲೇ ಹೆಂಗಸರು ಬಟ್ಟೆ ಒಗೆದು ಅಲ್ಲೇ ಒಣಗಿಸುತ್ತಿದ್ದರು. ಪಾತ್ರೆಗಳನ್ನು ಹೊಳೆಯುವ ಹಾಗೆ ತೊಳೆಯುತ್ತಿದ್ದರು. ಕೆರೆಯ ದಡದ ಸುತ್ತಾ, ಹರಿದ, ಹಳೆಯ ಬಟ್ಟೆಗಳ ರಾಶಿ ಅಲ್ಲಲ್ಲಿ ಬಿದ್ದು ಜನರ ಜೀವನಾಡಿಯಾದ ಕೆರೆಯ ದಡದ ಸಹಜ ಸೌಂದರ್ಯದಿಂದ ವಂಚಿಸಿತ್ತು.

ಆದರೆ ಆ ಕೆರೆಗೆ ಒಂದು ವಿಚಿತ್ರವಾದ ಸೆಳೆತವಿರುವಂತೆ ಕಾಣುತ್ತಿತ್ತು. ಕೆರೆಯ ದಡದಲ್ಲಿ ಇಬ್ಬರು ಹೆಂಗಸರು ಬಟ್ಟೆ ಒಗೆಯುತ್ತಿದ್ದರು. ಇಬ್ಬರು ಪೈಪೋಟಿ ನಡೆಸುವಂತೆ, ಎತ್ತಿ ಎತ್ತಿ ಜೋರಾಗಿ ಒಗೆಯುತ್ತಿದ್ದರು. ನನ್ನನ್ನು ನೋಡುತ್ತಲೇ ಒಗೆಯ್ಯು ವುದನ್ನು ನಿಲ್ಲಿಸಿ, ಯಾರು ಎಲ್ಲಿಂದ ಬಂದವರು, ಯಾಕೆ ಮುಂತಾದ ಕುಶಲೋಪರಿ ಮುಗಿದ ನಂತರ ಮಾತು ಕೆರೆಯ ಕಡೆ ಹೊರಳಿತು. ಕೆರೆಯ ನೀರು ನನ್ನ ಕಾಲುಗಳನ್ನು ಕಚಗುಳಿಯಿಡುತ್ತಿತ್ತು. "ಅಯ್ಯೋ ಈ ಕೆರೆಯ ಬಗ್ಗೆ ಕೇಳ್ಬೇಡಿ, ಈಗ ಕೆರೆ ಕೆಟ್ಟೋಗಿದೆ, ಹೊಲೇರ ಹಟ್ಟಿಯ ಗಂಡಸರು ಈ ಕೆರೆಯಲ್ಲಿ ಈಜ್ತವೆ, ಹೆಂಗಸರು ಬಂದು ಇಲ್ಲೇ ಬಟ್ಟೆ ಒಗೀತವೆ, ಯಾರೂ ಕೇಳೋರಿಲ್ಲ. ಮೊದಲು ನಾವು ಅವರಿಗೆ ನೀರು ಬೇಕಿದ್ರೆ ಬಿಂದಿಗೆಯಲ್ಲಿ ತುಂಬಿ, ಅಷ್ಟು ದೂರ ನಿಂತಿರುತ್ತಿದ್ದ ಅವರಿಗೆ ಹೊಯ್ಯುತ್ತಿದ್ದೆವು. ಆದರೆ ಈಗ ಕಾಲ ಬದಲಾಗೈತೆ ಅವರೇ ನೇರವಾಗಿ ಬಂದು ಕೆರೆಯಲ್ಲಿ ನೀರು ತುಂಬಿಕೊಳ್ತಾರೆ." ಎಂದು ಹೇಳುತ್ತಾ, ಬಟ್ಟೆ ಹರಿದು ಹೋಗು ವಂತೆ ಜೋರಾಗಿ ಎತ್ತಿ ಬಡಿಯ ತೊಡಗಿದಳು. ಒಗೆದ ಬಟ್ಟೆಯನ್ನು ದಡದಲ್ಲಿ ಒಣಗಿಸುತ್ತಿದ್ದ ಇನ್ನೊಬ್ಬಾಕೆ ಅವಳು ಹೇಳಿದ ಮಾತಿಗೆ ಸೈ ಎನ್ನುವಂತೆ ತಲೆದೂಗಿದಳು.

ಕೆರೆಯ ಸುತ್ತಲ ದಡದ ವಾತಾವರಣ ಸಂಪೂರ್ಣವಾಗಿ ಮಲಿನಗೊಂಡಿದೆ. ಹೆಜ್ಜೆ ಇಡಲೂ ಕಷ್ಟವಾಗುವಷ್ಟು ಜನರು ಗಬ್ಬೆಬ್ಬಿಸಿದ್ದಾರೆ. ಉಸಿರಾಡುವ ಗಾಳಿ ಮಲಿನಗೊಂಡಿದೆ. ಇದು ಈ ಹೆಂಗಸರಿಗೆ ಏಕೆ ಅಸಹ್ಯವಾಗಿ ಕಾಣುತ್ತಿಲ್ಲ? ವಾತಾವರಣ ಅಶುದ್ಧವಾಗಿದೆಯೆಂದು ಏಕೆ ಅನಿಸುತ್ತಿಲ್ಲ. ತಾವು ಮಾಡಿರುವ ಗಲೀಜಿಗೆ ಇವರು ಯಾಕೆ ಕುರುಡಾಗಿದ್ದಾರೆ. ಆದರೆ ಹೊಲೆಯ ಗಂಡಸರು, ನೀರಿಗೆ ಬಿದ್ದು ಈಜುವುದರಿಂದ, ಹೆಂಗಸರು ಪಾತ್ರೆ ತೊಳೆಯುವುದರಿಂದ ಕೆರೆ ಅಶುದ್ಧವಾಗಿದೆ, ಮಲಿನವಾಗಿದೆಯೆಂದು ಯಾಕೆ ಭಾವಿಸುತ್ತಾರೆ?

ತಮ್ಮ ಕಣ್ಣಿಗೆ ರಾಚುವ ಅಶುದ್ಧತೆ, ಮಲಿನತೆಗಿಂತ ತಾವು ನಂಬಿಕೊಂಡು ಬಂದ ಮೌಲ್ಯಗಳು ಅವರ ಸಹನೆಯನ್ನೇಕೆ ಕೆಣಕುತ್ತವೆ? ಕೆರೆಯ ಸುತ್ತ ಮಲಿನಗೊಂಡ ವಾತಾವರಣಕ್ಕಿಂತ, ಹೊಲೆಯರು ಮುಟ್ಟುವ ನೀರು ಅಶುದ್ಧವೇಕಾಗುತ್ತದೆ?

ಹೀಗೆ ಯೋಚಿಸುವ ಹೆಂಗಸರು ಸಂಪೂರ್ಣವಾಗಿ ಅಜ್ಞಾನಿಗಳಲ್ಲಿ ಮುಗ್ಧರೆನಲ್ಲ, ಹೊಸ ಆರ್ಥಿಕ ಬದಲಾವಣೆಗೆ ಬೇಗ ಸ್ಪಂದಿಸುವ, ಹೊಸ ವಿಚಾರಗಳಿಗೆ, ಜೀವನ ಶೈಲಿಗೆ, ಬದುಕಿನ ಹೊಸ ಆಯಾಮಕ್ಕೆ ತೆರೆದು ಕೊಳ್ಳಬಯಸುವ ಈ ಮಹಿಳೆಯರು 'ಶೂದ್ರ'ರ ವಿಚಾರಕ್ಕೆ ಬಂದಾಗ ಕಟ್ಟಾ ಸಂಪ್ರದಾಯವಾದಿಗಳಾಗಿ ಬಿಡುತ್ತಾರೆ. ವಿದ್ಯಾವಂತ ಮಹಿಳೆಯಲ್ಲಿ ಸೂಕ್ಷ್ಮ ಹಾಗೂ ನಯಗಾರಿಕೆ ಹಂತದಲ್ಲಿ ಕೆಲಸ ಮಾಡಿದರೆ, ಹಳ್ಳಿಯ ಹೆಂಗಸರು ಯಾವ ಸೋಗು ಇಲ್ಲದೆ, ನೇರವಾಗಿ ತಮ್ಮ ಅನಿಸಿಕೆಯನ್ನು ಹೇಳಿಬಿಡುತ್ತಾರೆ.

ಈ ಮೂಢನಂಬಿಕೆಗಳು, ಆಚರಣೆಗಳು, ಸಂಪ್ರದಾಯ ಪದ್ಧತಿಗಳು, ಅದರಲ್ಲಿರುವ ಜೀವಿ ವಿರೋಧಿ ಅಂಶಗಳು ಎಲ್ಲವೂ 'ಸಂಸ್ಕೃತಿ'ಯ ವ್ಯಾಖ್ಯಾದೊಳಗಡೆ ಸೇರಿಕೊಳ್ಳುತ್ತದೆ. ಅಂತಿಮವಾಗಿ ಈ ಸಂಸ್ಕೃತಿಯ ಭಾರವನ್ನು ಹೊರುವವರು ಹೆಂಗಸರು. ಹೆಂಗಸರು ಈ ಭಾರವನ್ನು ಮೌನವಾಗಿ ಹೊರುವುದಲ್ಲದೆ, ಅದನ್ನು ಮುಂದುವರಿಸಿಕೊಂಡು ಹೋಗುವವರು ಸ್ತ್ರೀಯರಾಗಿರುತ್ತಾರೆ. ಈ ಹೊರೆಯನ್ನು ಸ್ತ್ರೀಯರು ಉಸಿರೆತ್ತದೆ ಸಾಗಿಸುತ್ತಾ ಹೋಗುತ್ತಾರೆ.

ನೇರವಾಗಿ ವ್ಯಕ್ತಪಡಿಸುವ ಈ ಸಂಪ್ರದಾಯಿಕ ಧೋರಣೆಗಳು ಅನಾರೋಗ್ಯಕರವಾದರೂ ಅಪಾಯಕಾರಿಯಲ್ಲ. ಆದರೆ ಜನ ರಲ್ಲಿರುವ ಈ ಭಾವನೆಗಳನ್ನು ಬಿ.ಜೆ.ಪಿ.ಯಂತಹ ಕೋಮುವಾದಿ ಪಕ್ಷಗಳು ಹೇಗೆ ಉಳಿಸಿಕೊಂಡು ಜನರ ನಡುವೆ ದ್ವೇಷದ ಬೀಜವನ್ನು ಬಿತ್ತುತ್ತದೆ. ಸಮಗ್ರ ಬದಲಾವಣೆಯನ್ನು ಬಯಸುವ ಮಹಿಳೆಯರು ಈ ಬಗ್ಗೆ ಮುಕ್ತವಾಗಿ ಯೋಚಿಸ ಬೇಕಾದ ಅಗತ್ಯವಾಗಿದೆ. ●

# ಮೀಸಲಾತಿ ಮಾತುಕತೆ

ಅವರಿಬ್ಬರು ಪುರುಷರು, ಅದರಲ್ಲೂ ಹಿಂದುಳಿದ ವರ್ಗದ ಪುರುಷರು. ಅವರ ಮಾತುಕತೆ ಸಹಜವಾಗಿ ಮೀಸಲಾತಿಯ ಬಗ್ಗೆ ಹೊರಳಿತು.

"ಆ ಸಿ.ಎಂ.ಸಿ.ಯ ಸೀಟನ್ನು ಹೇಗಾದರೂ ಮಾಡಿ ಲೇಡೀಸ್ ರಿಸರ್ವ ಮಾಡಿಸಬೇಕು" ಆತ ಹೇಳಿದ.

"ಯಾರಪ್ಪ ಲೇಡೀಸ್ ರಿಸರ್ವ, ಈಗಿರೋದು ಸಾಲೋದಿಲ್ವಾ" ಸ್ನೇಹಿತ ಅಸಹನೆಯಿಂದ ನುಡಿದ.

"ಅಯ್ಯೋ ಕೇಳಿಲ್ಲಿ, ಧ್ವನಿಯನ್ನು ಸ್ವಲ್ಪ ಕುಗ್ಗಿಸಿ ಗುಟ್ಟಾಗಿ ಹೇಳುವಂತೆ" ಲೇಡೀಸ್ ರಿಸರ್ವ ಮಾಡಿಸದಿದ್ದರೆ, ಅದು ಷಡೂಲ್‌ನವರಿಗೆ ಹೋಗಿ ಬಿಡುತ್ತದೆ. ಅದಕ್ಕೆ ಲೇಡೀಸ್ ರಿಸರ್ವ ಮಾಡಿಸಿದರೆ, ಹೇಗಾದ್ರು 'ನಮ್ಮ' ಹೆಂಗಸರಿಗೆ ಸಿಗುತ್ತದೆ. ಷಡೂಲ್‌ನವರಿಗೆ ಹೋಗುವುದಕ್ಕಿಂತ ನಮ್ಮ ಹೆಂಗಸರಿಗೆ ಹೋಗಲಿ ಬಿಡು, "ದೊಡ್ಡ ಮನಸ್ಸಿನಿಂದ" ಅವರ ಹೆಂಗಸರ ಮೀಸಲಾತಿಗೆ ಮುದ್ರೆಯೊತ್ತಿದೆ.

"ಅಯ್ಯೋ, ನಮ್ಮ ಹೆಂಗಸರಿಗೆ ಸಿಗೋದೇನೋ ಸರಿ. ನಾನು ಒಪ್ಪುತ್ತೇನೆ ಆದರೆ, ನಮ್ಮ ಹೆಂಗಸರು, ಇದನ್ನು ನಿಭಾಯಿಸ ಬಲ್ಲರೆ? ಅವರಿಗೆ ಅಷ್ಟು ಶಕ್ತಿ ಇದೆಯೆ? ಈ ಜವಾಬ್ದಾರಿಯನ್ನು ಅವರು ಹೊರಬೇಕಾದರೆ, ಮನೆ, ಮಠ, ಮಕ್ಕಳು ಮರಿ ಎಲ್ಲಾ ಬಿಟ್ಟು ಹೋಗ್ಬೇಕಾಗುತ್ತದೆ. ಅವರು ಎಲ್ಲಾ ಬಿಟ್ಟುಹೋದರೆ, ನಾವು ಸೌಟು ಹಿಡಿಯಬೇಕಾಗುತ್ತದೆ? ಅಯ್ಯೋ ಹಿಡಿದ್ರಾಯಿತು? ಸಮಯ ಬಂದ್ರೆ

ಇದು ಮೇಲೆ ಹೇಳಿದಂತೆ ಇಬ್ಬರು ಹಿಂದುಳಿದ ಪುರುಷರ ನಡುವೆ ನಡೆದ ಮಾತುಕತೆಯ ತುಣುಕು. ಈ ತುಣುಕು ಮಹಿಳಾ ಮೀಸಲಾತಿಯ ಬಗ್ಗೆ ಹಾಗೂ ಮೀಸಲಾತಿಯೊಳಗಡೆ, ಹಿಂದುಳಿದ ವರ್ಗದ ಮಹಿಳೆಯರಿಗೆ ಪ್ರತ್ಯೇಕ ಮೀಸಲಾತಿ ಬೇಕೆ? ಬೇಡವೆ? ಎಂಬ ಗೊಂದಲಮಯ ವಾತಾವರಣದಲ್ಲಿ ಮಹಿಳಾ ಮೀಸಲಾತಿಯ ಅಂತರ್ಯದ ಹಿತಾಸಕ್ತಿಯನ್ನು, ಪುರುಷರ ರಾಜಕೀಯ ಕೆಲಸ ಮಾಡುವ ವಿಧಾನಕ್ಕೆ ಹಿಡಿದ ಕನ್ನಡಿಯಾಗಿದೆ.

ಸಂವಿಧಾನದಲ್ಲಿ ಪರಿಶಿಷ್ಟ ಜಾತಿ ಹಾಗೂ ವರ್ಗದವರಿಗೆ ನೀಡಲಾದ ಮೀಸಲಾತಿಯ ಬಗ್ಗೆ ಸಾಮಾನ್ಯವಾಗಿ ಪುರುಷರಲ್ಲಿ ಹಾಗೂ ಮಹಿಳೆ ಇಬ್ಬರಲ್ಲೂ ಅಸಹನೆಯ ಕಿಡಿಗಳಿವೆ. ಮೀಸಲಾತಿಯೊಳಗಿನ ಮೀಸಲಾತಿಯ ಪ್ರಶ್ನೆ ಬಂದಾಗ, ದಲಿತರು, ಹಿಂದುಳಿದ ವರ್ಗದ ಮಹಿಳೆಯರಿಗೂ ಈ ಸೌಲಭ್ಯವನ್ನು ನೀಡಬೇಕು ಎಂಬ ಅಭಿಪ್ರಾಯ ಹೊಂದಿರುವುದು ಕಂಡುಬರುತ್ತದೆ. ಆದರೆ, ಅದೇ ಹಿಂದುಳಿದ ವರ್ಗದ ಜನರು ಈ ವಿಚಾರದಲ್ಲಿ ದಲಿತ ಹಾಗೂ ಪರಿಶಿಷ್ಟವರ್ಗದ ಜನರ ಜೊತೆ ಕೈಜೋಡಿಸಲು ಹಿಂಜರಿಯುತ್ತಾರೆ.

ಈ ಮೇಲಿನ ಮಾತುಕತೆಯಲ್ಲಿ ಸ್ತ್ರೀಯರಿಗೆ ಮೀಸಲಾತಿಯನ್ನು ನೀಡುವುದರಲ್ಲಿ ಪುರುಷರಿಗೆ ಸಹಜವಾದ ಅಸಹನೆಯಿದೆ. ಅಭದ್ರತೆಯ ಭಾವನೆಯಿದೆ. ತಮಗೆ ಸಿಗುವ ಸೇವೆ ತಪ್ಪಿಹೋಗಿ ಬಿಡಬಹುದೆಂಬ ಹೆದರಿಕೆಯಿದೆ. ಆದರೆ, ಅವರು ಅದನ್ನು ಎದುರಿಸಲು ತಯಾರಿದ್ದಾರೆ, ಏಕೆಂದರೆ ಅಧಿಕಾರ 'ಷಡೂಲ್'ಗೆ ಹೋಗುವುದಕ್ಕಿಂತ 'ತಮ್ಮ' ಹೆಂಗಸರ ಕೈಗೆ ನೀಡಲು ಅವರಿಗೆ ಅವರ 'ಉದಾರತೆ' ಒಪ್ಪಿಗೆ ನೀಡುತ್ತದೆ.

ಈ 'ತಮ್ಮ' ಹೆಂಗಸರು ಎನ್ನುವ ಅಪಾಯಕಾರಿ ಧೋರಣೆಯನ್ನು ಸ್ತ್ರೀಯರು, ಎಲ್ಲಾ ವರ್ಗದ, ಜಾತಿಯ ಸ್ತ್ರೀಯರು ಗುರುತಿಸಬೇಕಾಗಿದೆ. ಯಾವುದೇ ತೀರ್ಮಾನವನ್ನು ತೆಗೆದುಕೊಂಡರು, ಅದು ಪುರುಷ ಹಿತಾಸಕ್ತಿಯನ್ನು ಕಾಪಾಡುವಲ್ಲಿ ಕೆಲಸ ಮಾಡುತ್ತದೆ. ಇದನ್ನು ಮಹಿಳಾ ಸಂಘಟನೆಗಳು ಎಚ್ಚರಿಕೆಯಿಂದ ಗಮನಿಸಬೇಕಾಗುತ್ತದೆ.

ಮೀಸಲಾತಿಯೊಳಗಡೆ ಮೀಸಲಾತಿ ಬೇಡ ಎನ್ನುವ ನಿಲುವು ಒಂದು ಹಂತದಲ್ಲಿ ಮೇಲ್ಜಾತಿ, ಮೇಲುವರ್ಗದ ಪುರುಷರ ಕೈಗೊಂಬೆಯಾಗದ ಸಾಧ್ಯತೆಯಿದೆ. ಹಾಗೆ ಮೀಸಲಾತಿಯೊಳಗಡೆ, ಮೀಸಲಾತಿ ಬೇಕು ಎನ್ನುವಲ್ಲಿಯೂ ಈ ಸಾಧ್ಯತೆಯನ್ನು ತಳ್ಳಿಹಾಕಲು ಸಾಧ್ಯವಿಲ್ಲ.

ಮಹಿಳಾ ಮೀಸಲಾತಿ, ಮೀಸಲಾತಿ ಒಳಗಡೆ ಮೀಸಲಾತಿಯ ವಿಚಾರವನ್ನು ಮಹಿಳಾ ಸಂಘಟನೆಗಳು ವಿವರವಾಗಿ ಜಾತಿ ವರ್ಗ, ಸೂಕ್ಷ್ಮವಾಗಿ ಕೆಲಸ ಮಾಡುವ ಹಿನ್ನಲೆಯಲ್ಲಿ ಗಮನಿಸಿ ಚರ್ಚಿಸಬೇಕಾಗುತ್ತದೆ. ಕೇವಲ 'ಬೇಕು' 'ಬೇಡ' ಎನ್ನುವ ಹಂತದ ಚರ್ಚೆಯಲ್ಲಿ ವಾಸ್ತವಿಕ ಸತ್ಯಗಳನ್ನು ಕಣ್ಣೆದುರಿನ ಸತ್ಯಗಳನ್ನು ತಿರಸ್ಕರಿಸಿದಂತಾಗುತ್ತದೆ.

*ರಾಜೇಶ್ವರಿ ಎಚ್. ಎಸ್.*

# ಚಮೇಲಿ ದೇವಿ

ಚಮೇಲಿ ದೇವಿಯು ೧೯೧೦ರಲ್ಲಿ ರಾಜಾಸ್ಥಾನದ ಆಲ್ವಾರ್ ಎಂಬ ಹಳ್ಳಿಯಲ್ಲಿ ಸಂಪ್ರದಾಯಸ್ಥ ಕುಟುಂಬದಲ್ಲಿ ಜನಿಸಿದರು. ಧಾರ್ಮಿಕ ಆಚರಣೆಯಲ್ಲಿ ಮುಳುಗಿ ಹೋದ ಅವಿಭಕ್ತ ಕುಟುಂಬದಲ್ಲಿ ಒಬ್ಬಳೆ ಮಗಳಾದ ಚಮೇಲಿ ೫ನೇ ತರಗತಿಯವರೆಗೆ ಓದಿದ್ದರು. ಮದುವೆಯ ನಂತರ ದೆಹಲಿಯ ಚಿನ್ನಾಭರಣ ವ್ಯಾಪಾರಿಗಳ ಕುಟುಂಬಕ್ಕೆ ಬಂದು ನೆಲೆಸುತ್ತಾರೆ. ಗಂಡನ ಮನೆಯೂ ಸಂಪ್ರದಾಯಸ್ಥ ಅವಿಭಕ್ತ ಕುಟುಂಬವಾಗಿದ್ದು, ಹೆಣ್ಣುಮಕ್ಕಳ ಜೀವನ ಅಡುಗೆ ಮನೆ, ಧಾರ್ಮಿಕ ಆಚರಣೆಗಳಿಗಷ್ಟೆ ಸೀಮಿತವಾಗಿತ್ತು. ಹೆಂಗಸರು ಮುಖ ತೋರಿಸದಂತೆ ಮುಸುಗು ಹಾಕಿಕೊಂಡು ಓಡಾಡಬೇಕಿತ್ತು.

ಚಮೇಲಿ ದೇವಿಯವರ ಪತಿ ಫೂಲ್‌ಚಂದ್ ಜೈನ್ ಅವರು ಸ್ವಾತಂತ್ರ್ಯ ಸಂಗ್ರಾಮದಲ್ಲಿ ತೊಡಗಿಸಿಕೊಂಡಿದ್ದರು. ೧೯೩೦ ರಿಂದ ೧೯೪೨ರ ಅವಧಿಯಲ್ಲಿ ಹಲವಾರು ಭಾರಿ ಜೈಲುವಾಸ ಅನುಭವಿಸಿದ್ದರು. ೧೯೩೨ರಲ್ಲಿ ಅವರು ಬಾಂಬ್ ಅಸ್ಫೋಟಿಸುವ ಸಂಚಿನಲ್ಲಿ ಪಾಲ್ಗೊಂಡಿದ ಸಂದರ್ಭದಲ್ಲಿ ಚಮೇಲಿದೇವಿಗೆ ಅವರು "ನನ್ನನ್ನು ಬ್ರಿಟಿಷರು ಯಾವಾಗ ಬೇಕಾದರೂ ಬಂಧಿಸಬಹುದು, ನೀನು ಮಗುವಿನ, ಕುಟುಂಬದ ಜವಾಬ್ದಾರಿ ನೋಡಿಕೊಳ್ಳಬೇಕು" ಎಂದು ಹೇಳಿದರು. ಈ ಮಾತಿಗೆ ಚಮೇಲಿದೇವಿ ನೀಡಿದ ಪ್ರತಿಕ್ರಿಯೇ ಫೂಲ್‌ಚಂದ್ ಅವರನ್ನು ದಂಗು ಪಡಿಸಿತು. "ನೀವು ಸತ್ಯಾಗ್ರಹಕ್ಕೆಂದು ಹೋದಾಗ ನನ್ನನ್ನು ಮಗು, ಕುಟುಂಬವನ್ನು ನೋಡಿಕೊ ಎಂದು ಯಾವತ್ತಿಗೂ ಹೇಳಬೇಡಿ, ನಾನು ಹೊರಗೆ ಹೋಗುತ್ತೇನೆ ಜೈಲಿಗೂ ಹೋಗುತ್ತೇನೆ, ಈ ಭಾರಿ ನಿಮಗಿಂತ ಮೊದಲು" ಎಂದು ಚಮೇಲಿ ಪತಿಗೆ ಹೇಳಿದರು.

ಖಾದಿ ಸೀರೆ ಉಡುವುದನ್ನು ಚಮೇಲಿಯವರು ಕಲಿತುಕೊಂಡು ಒಂದು ದಿವ ತನ್ನ ಅತ್ತೆಯ ಕಾಲಿಗೆ ಮುಗಿದು ಹೋಗಿಬರುತ್ತೇನೆ ಎಂದರು. ಎಲ್ಲಿಗೆ ಎಂದು ಕೇಳಿದಾಗ ಜೈಲಿಗೆ ಎಂದು ಹೊರಟರು. ಗಾಂಧಿಯ ಬಾವುಟ ಹಿಡಿದು, ಸ್ವದೇಶಿ ಘೋಷಣೆಗಳನ್ನು ಕೂಗುತ್ತಾ; ಮಾರುಕಟ್ಟೆಯ ಬೀದಿಗಳಲ್ಲಿ ಹೋದರು. ವಿದೇಶಿವಸ್ತ್ರ ಮಾರಾಟ ಮಾಡುವ ಅಂಗಡಿಯ ಮುಂಪೆ ಪಿಕೇಟಿಂಗ್ ನಡೆಸಿದರು. ಮೊದಲೇ ಹೇಳಿದಂತೆ ಬಂಧಿಸಲ್ಪಟ್ಟು ಜೈಲಿಗೆ ಹೋದರು. ಪಲ್ಲಕ್ಕಿಯಲ್ಲಿ ಕೂತು ಮುಸುಗು ಹಾಕಿಕೊಂಡು ಓಡಾಡುವ ಸಂಪ್ರದಾಯಸ್ಥ ಕುಟುಂಬದ ಹೆಣ್ಣೊಬ್ಬಳು ಬೀದಿಯಲ್ಲಿ ಎಲ್ಲರೆದುರು ಬಂಧಿತಳಾಗಿ ಜೈಲಿಗೆ ಹೋದದ್ದು ಮನೆಯವರಿಗೆ ಆಘಾತ ನೀಡಿತ್ತು. ಹುಟ್ಟಿದ ಮನೆಯವರಿಗಂತೂ, ಅವಳ ಪಾವಿತ್ರ್ಯತೆ ನಾಶವಾಗಿ ಬಿಡಬಹುದೆಂಬ ಭಯ ಹುಟ್ಟಿತ್ತು. ಆಕೆಯನ್ನು ದೆಹಲಿಯ ಜೈಲಿನಿಂದ ಲಾಹೋರಿನ ಜೈಲಿಗೆ ವರ್ಗಾಯಿಸಿದಾಗ, ಅವರು ದೂರದ ಅಪರಿಚಿತ ವಾತಾವರಣವನ್ನು ಆಕೆ ತಡೆದುಕೊಳ್ಳಲಾರಳೆಂದೆನಿಸಿದ ಆಕೆಯ ಪತಿ ಆಕೆಯ ಬಳಿ ಹೋಗಿ ಬ್ರಿಷರು ವಿಧಿಸಿದ್ದ ೨೫೦/- ದಂಡ ಕಟ್ಟಿ ಬಿಡುಗಡೆಯಾಗುವ ಸಲಹೆಯನ್ನು ಮುಂದಿಟ್ಟರು. ಆಗ ಆಕೆ ಪತಿಯ ದುರ್ಬಲತೆಯನ್ನು ಆಕ್ಷೇಪಿಸಿ ಹಿಂದಕ್ಕೆ ಕಳಿಸುತ್ತಾರೆ. ೧೯೩೨ರ ಫೆಬ್ರುವರಿಯಿಂದ ಜೂನ್ ೨೦ರ ವರೆಗೆ ಜೈಲುವಾಸ ಅನುಭವಿಸುತ್ತಾರೆ.

ಜೈಲಿನಿಂದ ಹಿಂತಿರುಗಿ ಬಂದಮೇಲೆ ಚಮೇಲಿಯವರ ಕುಟುಂಬದ ವಹವಾಟುಗಳಲ್ಲಿ ತೊಡಗಿಸಿಕೊಳ್ಳುತ್ತಾರೆ. ಚರಕದಿಂದ ಖಾದಿನೂಲು ತೆಗೆಯುತ್ತಿದ್ದರು. ತನ್ನ ಅತ್ತೆಗೆ ತಾವೇ ನೇಯ್ದು ತಯಾರಿಸಿದ ಸೀರೆಯನ್ನು ಉಡುಗೊರೆ ನೀಡುತ್ತಾರೆ. ಜೈಲಿನಿಂದ ಬಂದಮೇಲೆ ಹೆಚ್ಚು ಮೌನಿಯಾದರೂ, ಸರಳ ಜೀವನ ಮತ್ತು ತ್ಯಾಗವೆಂಬ ಗಾಂಧೀ ಚಿಂತನೆಯಡೆಗೆ ಇಡೀ ಕುಟುಂಬವನ್ನು ಬದಲಾಯಿಸುವಲ್ಲಿ ಪ್ರಮುಖ ಪಾತ್ರವಹಿಸುತ್ತಾರೆ.

ಮಹಿಳೆ ಎಂದರೆ ಬೆದರುಗೊಡ್ಡು ಎಂಬ ಜನಜನಿತ ನಂಬಿಕೆಯನ್ನು ಚಮೇಲಿಯವರು ಸುಳ್ಳಾಗಿಸಿ, ಸ್ವಾತಂತ್ರ್ಯ ಸಂಗ್ರಾಮದಲ್ಲಿ ಪಾಲ್ಗೊಂಡು, ನಂತರ ಇಡೀ ಕುಟುಂಬವನ್ನು ಗಾಂಧಿಯ ಸಿದ್ಧಾಂತಗಳಿಗೆ ಬದಲಿಸಿದ ಧೈರ್ಯವಂತೆ. ಯಾವುದೇ ಅಬ್ಬರ, ಆಡಂಬರಗಳಿಲ್ಲದೆ, ಸ್ವಾರ್ಥವಿಲ್ಲದೆ, ಹೆಸರಿಗೋಸ್ಕರವೂ ಅಲ್ಲದೆ ಹೋರಾಟ ಮಾಡಿದ್ದು ಸ್ಮರಿಸಿಕೊಳ್ಳಬೇಕಾದುದು.

೧೯೮೦ರಲ್ಲಿ ಚಮೇಲಿ ದೇವಿಯವರ ನಿಧನದ ನಂತರ ಆಕೆಯ ಹೆಸರಿನಲ್ಲಿ ದಿಟ್ಟ ಮಹಿಳಾ ಪತ್ರಕರ್ತರಿಗೆ ಪ್ರಶಸ್ತಿ ನೀಡಲಾಗುತ್ತಿದೆ.

*ಕೃಪೆ: ಡೆಕ್ಕನ್ ಹೆರಾಲ್ಡ್*

# ಜನವರಿ 26 - ವಿದ್ರೋಹಿತ ಜನಗಳ ಆಚರಣೆ

ಜನವರಿ 26 ಭಾರತ ಸಾರ್ವಭೌಮ ಜನತಾಂತ್ರಿಕ ಗಣತಂತ್ರ ರಾಷ್ಟ್ರವೆಂದು ಘೋಷಿಸಿಕೊಂಡ ದಿನ. ಜನರೇ ಸಾರ್ವಭೌಮರೆಂದು ಘೋಷಿಸಿಕೊಂಡ ದಿನಾಚರಣೆಯಂದು ನಿಜಕ್ಕೂ ಪ್ರದರ್ಶನವಾಗುವುದು ಮಿಲಿಟರಿ ವೈಭವ ಮತ್ತು ಕೆಲವು ರಾಜ್ಯಗಳ ವಿಶಿಷ್ಟತೆ ಸ್ಯಾಂಪಲ್ಸ್!

ಜನರ ಮೂಲಭೂತ ಅಗತ್ಯಗಳನ್ನು ಪೂರೈಸದೆ ಕೊಬ್ಬಿರುವ ರಾಜಕೀಯ ನಾಯಕರುಗಳ ಆಚರಿಸುವ ಗಣರಾಜ್ಯೋತ್ಸವಕ್ಕಿಂತ ಭಿನ್ನವಾಗಿ, ಅರ್ಥಪೂರ್ಣವಾಗಿ ಗಣರಾಜ್ಯೋತ್ಸವವನ್ನು ಆಚರಿಸುವ ಉದ್ದೇಶದಿಂದ ಬೆಂಗಳೂರಿನ ಜನಪರ ಸಂಘಟನೆಗಳು ನರ್ಮದಾ ಐಕ್ಯ ರಂಗ-ವೇದಿಕೆಯಡಿ ಗಣರಾಜ್ಯೋತ್ಸವವನ್ನು ವಿದ್ರೋಹಿತ ಜನಗಳ ಆಚರಣೆಯನ್ನಾಗಿ ಆಚರಿಸಿದವು. ಮಧ್ಯಾಹ್ನ 2.30ಕ್ಕೆ ಟೌನ್‌ಹಾಲ್ ಚೌಕದಲ್ಲಿ ಸೇರಿ ಅಲ್ಲಿಂದ ಮೆಜೆಸ್ಟಿಕ್ ರೈಲ್ವೆ ನಿಲ್ದಾಣದವರೆಗೂ ಮೆರವಣಿಗೆಯಲ್ಲಿ ಹೋಗಲಾಯ್ತು. ಮೆರವಣಿಗೆಯನ್ನು ಒಂದೆರಡು ಕಡೆ ನಿಲ್ಲಿಸಿ ಹಾಡು, ಬೀದಿ ನಾಟಕಗಳನ್ನು ಪ್ರದರ್ಶಿಸಲಾಯ್ತು ರೈಲ್ವೆ ನಿಲ್ದಾಣದ ಮುಂದಿರುವ ಜಾಗದಲ್ಲಿ ಸಾರ್ವಜನಿಕ ಸಭೆಯನ್ನು ಏರ್ಪಡಿಸಲಾಗಿತ್ತು. ವಿವಿಧ ಸಂಘಟನೆಯ ಸದಸ್ಯರು ಮಾತನಾಡಿದರು. ದೇಶದ ವಿವಿಧ ಕ್ಷೇತ್ರಗಳಲ್ಲಿನ (ಶಿಕ್ಷಣ, ಆರೋಗ್ಯ, ಉದ್ಯೋಗ, ಮಹಿಳೆಯರ ಮೇಲಿನ ಹಿಂಸೆ) ನಿಜಸ್ಥಿತಿಯನ್ನು ಬಿಂಬಿಸುವ ಬೀದಿನಾಟಕವನ್ನು ಪ್ರದರ್ಶಿಸಲಾಯ್ತು. ದುಡಿವ ಜನರ ಮೇಲಿನ ಅನ್ಯಾಯ, ರಾಜಕೀಯ ನಾಯಕರುಗಳ, ಚುನಾವಣೆಗಳಲ್ಲಿ ನಡೆವ ಮೋಸ ಕುರಿತು ಕಟ್ಟಿರುವ ಹಾಡುಗಳನ್ನು ಹಾಡಲಾಯ್ತು. ಪ್ರಜೆಗಳನ್ನು ಕೋತಿಯಾಗಿಸಿ ಕುಣಿಸುವ ರಾಜಕೀಯ ನಾಯಕರ ಮೋಸ ಬಯಲಿಗೆಳೆಯುವ ವಿಡಂಬನೆಯನ್ನು ಪ್ರದರ್ಶಿಸಲಾಯತ್ತು. ಕಾರ್ಯಕ್ರಮದ ಅಂಗವಾಗಿ ಹೊರತಂದ ಕರಪತ್ರವನ್ನು ಮಾನಸ ಓದುಗರಿಗಾಗಿ ಪ್ರಕಟಿಸಿದ್ದೇವೆ.

## ಜನತೆಗೆ ಸತ್ಯವನ್ನು ತಿಳಿಸುವ ಸಮಯವಿದು

ಮಿತ್ರರೆ!

ಮರೆಯದಿರಿ ಇಂದು ಗಣರಾಜ್ಯೋತ್ಸವ, ಆಚರಣೆಗೆ ಮತ್ತೊಂದು ದಿನ, ನಮ್ಮ ಸಂವಿಧಾನ ಹೊಸ ಸಹಸ್ರಮಾನವನ್ನು ಪ್ರವೇಶಿಸಿದೆ. ಅದರ ಧ್ಯೇಯೋದ್ದೇಶಗಳನ್ನು ಜೀವಿಸದಿದ್ದರೂ ಸಹ, ನಮಗಿಷ್ಟವಾದಂತೆ ಆಚರಿಸಲು ನಾವು ಸ್ವತಂತ್ರರು.

ನಮ್ಮ ಮಹಾದೇಶಭಕ್ತ ರಾಜಕಾರಣಿಗಳು ತಮ್ಮ ರಾಜಭವನಗಳಲ್ಲಿ, ನಮ್ಮ ಉಪಕಾರಿ ವ್ಯಾಪಾರಿಗಳು ತಮ್ಮ ಕ್ಲಬ್‌ಗಳಲ್ಲಿ ಮತ್ತು ವಿಶ್ರಾಂತಿಧಾಮಗಳಲ್ಲಿ, ನಮ್ಮ ಕರ್ತವ್ಯ ನಿರತ ಸರ್ಕಾರಿ ಅಧಿಕಾರಿಗಳು, ನಮ್ಮ ಮೃದು ಹೃದಯ ಪೋಲಿಸರು, ನಮ್ಮ ಕ್ರಿಕೆಟ್ ಆಟಗಾರರು ವಿದೇಶಿ ಕಂಪನಿಗಳ ನಾದಕ್ಕೆ ಕುಣಿಯುತ್ತಿರುವರು, ಅಲ್ಲದೆ ನಮ್ಮ ವಿದೇಶಿ ಭಾರತ ಪ್ರಜೆಗಳು ಪರದೇಶದಲ್ಲಿ ಜೀವಿಸುತ್ತ, ಇಲ್ಲಿನ ಸಾವು ನೋವು ಮತ್ತು ಕಾಯಿಲೆಗಳಿಂದ ತಪ್ಪಿಸಿಕೊಂಡಿದ್ದಾರೆ. ಇವರೆಲ್ಲರೂ ಭಾರತದ ಹೆಮ್ಮೆಯ ಪ್ರಜೆಗಳು, ನಮಗಿಂತಲೂ ಅಧಿಕವಾಗಿ ಭಾರತೀಯತೆಯನ್ನು ಮೈಗೂಡಿಸಿಕೊಂಡಿರುವರು, ಏಕೆಂದರೆ ಇವರೆಲ್ಲರೂ ತಮ್ಮ ದೇಶಭಕ್ತಿಯನ್ನು ಮುಚ್ಚಿಡದೆ ಭಾಷಣಗಳಲ್ಲಿ, ದೂರದರ್ಶನ ಜಾಹೀರಾತುಗಳಲ್ಲಿ ಮತ್ತು ಜಾಹೀರಾತು ಫಲಕಗಳಲ್ಲಿ ಯಥೇಚ್ಛವಾಗಿ ತೋರುತ್ತಿದ್ದಾರೆ. ಭಾರತ ಇವರದ್ದೇ.

ಇಂದು ನಮ್ಮಲ್ಲಿ ಶಸ್ತ್ರಾಸ್ತ್ರಗಳು ಮತ್ತು ಸೈನ್ಯವು ಪ್ರದರ್ಶನಗೊಳ್ಳಲಿವೆ. ನಮ್ಮದೇ ಆದ ದೇಶೀ ಪರಮಾಣು ಬಾಂಬ್, ನಮ್ಮ ಬ್ರಹ್ಮಾಸ್ತ್ರ!

ಆದರೆ......ಈ ಎಲ್ಲಾ ಪ್ರದರ್ಶನಕ್ಕೂ ಈ ದೇಶಭಕ್ತರಾರೂ ತಮ್ಮ ಜೇಬಿನಿಂದ ಖರ್ಚು ಮಾಡುವುದಿಲ್ಲ. ಪರಮಾಣು ಬಾಂಬುಗಳು ಸಮೂಹ ಆತ್ಮಹತ್ಯ ಬಾಂಬುಗಳಾಗಿದ್ದು, ಬಡಜನತೆಯ ರೊಟ್ಟಿಯನ್ನು ಕಸಿದುಕೊಂಡು ಮಾಡಿರುವಂಥವು ಬಜೆಟ್ ನಂತರದ ಬಜೆಟ್‌ಗಳಲ್ಲಿ ಪ್ರಾಥಮಿಕ ಆರೋಗ್ಯ ಮತ್ತು ಶಿಕ್ಷಣಕ್ಕೆಂದು ಮೀಸಲಿದ್ದ ಹಣವನ್ನು ರಕ್ಷಣಾ ಶಕ್ತಿ ಮತ್ತು ಹೊರಗಿನ ಶಸ್ತ್ರಾಸ್ತ್ರಗಳನ್ನು ಖರೀದಿಸಲು ಬಳಸಿಕೊಳ್ಳಲಾಗಿದೆ. ಎಲ್ಲಾ ರಾಷ್ಟ್ರಭದ್ರತೆಯ ಹೆಸರಿನಲ್ಲಿ ಆದರೆ ಯಾರ ಭದ್ರತೆಯ ಬಗ್ಗೆ ನಾವು ಮಾತನಾಡುತ್ತಿರುವುದು?

ನಮ್ಮಲ್ಲಿ 40 ಮಿಲಿಯನ್ ನಿರುದ್ಯೋಗಿಗಳು ಇವರಿಗೆ ಕೆಲಸ ಬೇಕಾಗಿದೆ ಬಾಂಬುಗಳಲ್ಲ. ನಮ್ಮಲ್ಲಿ ಅತೀ ಹೆಚ್ಚಿನ ಕ್ಷಯ ರೋಗಿಗಳು, ಮಲೇರಿಯ ರೋಗಿಗಳು ಮತ್ತು ಏಡ್ಸ್ ರೋಗಿಗಳು ಇದ್ದಾರೆ. ಸರಳವಾಗಿ ತಡೆಗಟ್ಟಬಹುದಾದ ಔಷಧಿಗಳು ಅಥವಾ ಮಾಹಿತಿ ಇವರೆಲ್ಲರಿಗೂ ನೆರವಾಗಬಹುದಾಗಿದೆ. ಭಾರತದಲ್ಲಿ 20,000 ಜನಕ್ಕೆ ಒಬ್ಬ ಡಾಕ್ಟರಿದ್ದರೆ, 20 ಮಂದಿ ಪೋಲಿಸರು! ಇದರಲ್ಲಿ ಸೈನ್ಯವನ್ನು ಸೇರಿಸಿಲ್ಲ. ಭಾರತದ ಪ್ರತೀ ಎರಡನೇ ಮಗು ಪೌಷ್ಟಿಕ ಆಹಾರ ಕೊರತೆಯಿಂದ ನರಳುತ್ತದೆ. ಆದರೆ ನಮ್ಮ

ಹೂಗಳನ್ನೂ ಅಮೇರಿಕಾದವರಿಗೆ ರಫ್ತು ಮಾಡಲು ರೈತರನ್ನು ಪ್ರೋತ್ಸಹಿಸಲಾಗುತ್ತಿದೆ. ಏಕೆಂದರೆ ಅಮೇರಿಕಾದವರು ನಮಗೆ ಆಹಾರ ಕಳುಹಿಸಿ ಕೊಡಲು ಬಯಸಲಾಗಿದೆ.

ಸವರ್ಣೀಯ ರಣವೀರ ಸೇನೆ ದಲಿತ ರೈತರನ್ನು ಕೊಂದಾಗ, ಅಥವಾ ಪ್ರತೀ 20 ನಿಮಿಷಗಳಿಗೊಮ್ಮೆ ನಡೆಯುತ್ತಿರುವ ಅತ್ಯಚಾರ ತಡೆದು, ರಕ್ಷಣೆ ನೀಡಲು ಸ್ಯೆನ್ಯ, ಪೋಲಿಸ್, ಬಾಂಬಗಳು ಮತ್ತು ಸ್ವಘೋಷಿತ ದೇಶಭಕ್ತರಾರು ಅಲ್ಲಿ ಇಲ್ಲ. ಮೂಲಭೂತ ಅವಶ್ಯಕತೆಗಳು ನಮ್ಮ ಆದ್ಯ ಭದ್ರತೆಯಾಗಿದೆ. ನಮ್ಮ ಬಾಂಬ್ ಕಾರ್ಗಿಲನ್ನು ತಡೆಯದೆ, ಅದನ್ನು ಪ್ರೇರೇಪಿಸಿತು. ಅಲ್ಲಿ ನಮ್ಮ 2000 ಸಾಮಾನ್ಯ ಸೈನಿಕರು ಸಾವಿಗೀಡಾಗಿದ್ದಾರಷ್ಟೇ.

ಜಾತ್ಯಾತೀತತೆ ಮಾಸಿ, ತ್ರಿವರ್ಣ ಧ್ವಜ ಕೇಸರಿಯಾಗಿ ಕಂಗೊಳಿಸುತ್ತಿದೆ. ಹಿಂದುತ್ವ ವಾದಿಗಳು ಅದನ್ನು ಸಂವಿಧಾನದ ಮೇಲೆ ಆರೋಪಿಸಿ, ಮಹಿಳೆ ಮತ್ತು ದಲಿತರನ್ನು ಶೋಷಿಸಿದ ಮನುಸ್ಮೃತಿಯನ್ನು ಆಚರಣೆಗೆ ತರಲು ಬಯಸುತ್ತಿದ್ದಾರೆ.

ಮಿತ್ರರೇ, ಈ ಎಲ್ಲಾ ಅಜ್ಞಾನ ಮತ್ತು ಗೊಂದಲದ ಮಧ್ಯೆ ಭರವಸೆ ಇದೆ. ಈ ಭರವಸೆ ನಮ್ಮ ದೇಶದ ಸೌಂದರ್ಯ, ಸಂಪನ್ಮೂಲಗಳು ಮತ್ತು ವೈವಿಧ್ಯತೆಯನ್ನು ಜೀವಂತವಾಗಿರಿಸಲು ಹೆಣಗಾಡುತ್ತಿರುವವರಿಂದ ಬರುವಂತದ್ದಾಗಿದೆ. ಯಾರು ಪ್ರಜಾಪ್ರಭುತ್ವ ಮತ್ತು ಜಾತ್ಯಾತೀತ ವ್ಯವಸ್ಥೆಗಾಗಿ ಹೋರಾಡುತ್ತಿದ್ದಾರೋ ಅವರೇ ನಿಜವಾದ ದೇಶಭಕ್ತರು, ಅವರ ಕುರಣೆಗೆ ಎಲ್ಲೆ ಇಲ್ಲ. ಇವರ್‍ಯಾರೆಂದರೆ ಬಡ ಆದಿವಾಸಿಗಳು, ದಲಿತರು, ರೈತರು, ಮಹಿಳೆಯರು, ಬೆಸ್ತರು.... ಆಲಮಟ್ಟಿ ಮತ್ತು ನರ್ಮದಾದಂಥ ದೊಡ್ಡ ಅಣೆಕಟ್ಟುಗಳಿಂದ, ಕಾರವಾರ ಸೀಬರ್ಡ್ ನೌಕ ನೆಲೆಯಿಂದ ನಿರಾಶ್ರಿತರಾದವರು, ಕೇರಳದ ಗ್ರಾಸಿಂ ಕಾರ್ಖಾನೆಯಿಂದ ಮಲಿನಗೊಂಡ ಚಾಲಿಯರ್ ನದಿಗಾಗಿ ಹೋರಾಡುತ್ತಿರುವವರು ಹೀಗೆ ಅನೇಕ ಜನಪರ ಆಂದೋಲನಗಳು ನಮ್ಮ ವೈವಿಧ್ಯತೆ ಮತ್ತು ಸ್ವಾವಲಂಬನೆಯನ್ನು ಪೋಷಿಸುತ್ತಿವೆ.

ನೀವು ಸಂವಿಧಾನವನ್ನೂ ಜೀವಂತವಾಗಿರಿಸಲು ಮತ್ತು ಕ್ರಿಯಾಶೀಲವಾಗಿಸಲು ನೆರವಾಗಿ, ದಮನಿತರ ಹೋರಾಟಗಳನ್ನು ಬೆಂಬಲಿಸಿ, ಇದೇ ನಮ್ಮ ಗಣರಾಜ್ಯೋತ್ಸವ ದಿನದ ಆಚರಣೆಯಾಗಿದೆ.

ಪುರಭವನದಿಂದ ರೈಲ್ವೇ ನಿಲ್ದಾಣದವರೆಗಿನ ಮೆರವಣಿಗೆಯಲ್ಲಿ ನೀವೆಲ್ಲಾ ಭಾಗವಹಿಸಿ, ಸಮಯ ಮಧ್ಯಾಹ್ನ 2 ಗಂಟೆ

*ನರ್ಮದಾ ಐಕ್ಯ ರಂಗ, 539, ಹೆಚ್.ಎಂ.ಟಿ. ಲೇಔಟ್, ಬೆಂಗಳೂರು 32*

## ಸಿ.ಬಿ.ಐ. ತನಿಖೆಯ ಪರಿ!

1996ರ ಜನವರಿಯಲ್ಲಿ ದೆಹಲಿಯಲ್ಲಿ ಕಾನೂನು ವಿದ್ಯಾರ್ಥಿಯಾಗಿದ್ದ ಪ್ರಿಯದರ್ಶಿನಿ ಮ್ಯಾಟೋಳ ಮೇಲೆ ಅತ್ಯಾಚಾರ ನಡೆಸಿ, ಅವಳನ್ನು ಅಮಾನುಷವಾಗಿ ಕೊಲೆ ಮಾಡಲಾಗಿತ್ತು. 1999ರ ಡಿಸೆಂಬರ್‌ನಲ್ಲಿ ಆರೋಪಿಯಾದ ಸಂತೋಷ್‌ಸಿಂಗ್‌ನನ್ನು ಸಾಕ್ಷಿ ಪುರಾವೆಗಳ ಕೊರತೆಯಿಂದ ಬಿಡುಗಡೆ ಮಾಡಲಾಯಿತು. ಪ್ರಿಯದರ್ಶಿನಿಯ ಕೊಲೆಯ ಪ್ರಕರಣವನ್ನು ಸಿ.ಬಿ.ಐ. ತನಿಖೆ ನಡೆಸಿ ಕೇಸನ್ನು ದಾಖಲು ಮಾಡಲಾಗಿತ್ತು. ಸಿ.ಬಿ.ಐ. ನಡೆಸಿದ ತನಿಖೆಯ ಅಸಮರ್ಥತೆಯ ಬಗ್ಗೆ ನ್ಯಾಯಾಲಯು ಸಹ ತನ್ನ ಆಕ್ಷೇಪವನ್ನು ವ್ಯಕ್ತಿಪಡಿಸಿತ್ತು. ಜೊತೆಗೆ ತಾಂತ್ರಿಕ ದೋಷಗಳ ಬಗ್ಗೆ ಅಸಹನೆಯನ್ನು ವ್ಯಕ್ತಪಡಿಸಿದೆ

ಪತ್ರಿಕೆಗಳ ವರದಿಗಳ ಪ್ರಕಾರ ಡಿ.ಎನ್.ಎ. ವರದಿಯನ್ನು ತಿರುಚಲಾಗಿತ್ತು. ರಕ್ತ ಪರೀಕ್ಷೆಯ ಮಾದರಿ, ಬೆರಳಚ್ಚು ಹಾಗೂ ಇತರ ಸಾಕ್ಷಿಗಳನ್ನು ನಾಶಪಡಿಸಲಾಗಿತ್ತು. ನ್ಯಾಯಾಧೀಶರ ಸಿ.ಬಿ.ಐ. ನಡೆಸಿದ ತನಿಖೆಯ ಈ ತಾಂತ್ರಿಕ ದೋಷಗಳನ್ನು ಒಪ್ಪಿಕೊಂಡಿರುವುದು, ನ್ಯಾಯಾಲಯದಿಂದ ಸಿಗುವ ನ್ಯಾಯವನ್ನೇ ಅಣಕಿಸುವಂತಿತ್ತು.

ಪೋಲಿಸರು ಹಾಗೂ ತನಿಖೆ ನಡೆಸುವ ಅಧಿಕಾರಿಗಳು ಆರೋಪಿಯನ್ನು ರಕ್ಷಿಸಲು ಹಲವಾರು ದಾರಿಗಳನ್ನು ಹುಡುಕಿರುವುದು ಸ್ಪಷ್ಟವಾಗಿದೆ. ಸಿ.ಬಿ.ಐ.ನ ಹಿರಿಯ ಅಧಿಕಾರಿಗಳು ಪ್ರಕರಣವನ್ನು ತನಿಖೆ ನಡೆಸಿದ ಅಧಿಕಾರಿಗಳ ಮೇಲೆ ತನಿಖೆ ನಡೆಸಲು ಒಪ್ಪಿರುತ್ತಾರೆ. ಹೇಗೆ ಸುಳ್ಳು ದಾಖಲೆಗಳನ್ನು ಸೃಷ್ಟಿಸಲಾಯಿತು, ಯಾರ ಒತ್ತಡದ ಮೇಲೆ ಆರೋಪಿಯನ್ನು ರಕ್ಷಿಸಲಾಯಿತು, ಮುಂತಾದ ವಿಷಯಗಳ ಸುತ್ತ ತನಿಖೆ ನಡೆಸಲಿದ್ದಾರೆ. ಚಿಕ್ಕ ವಯಸ್ಸಿನ ಹೆಣ್ಣುಮಕ್ಕಳ ಮೇಲೆ, ಶಾಲಾ ಕಾಲೇಜುಗಳಲ್ಲಿ ಓದುತ್ತಿರುವ ವಿದ್ಯಾರ್ಥಿನಿಯರ ಮೇಲೆ ನಡೆಯುತ್ತಿರುವ ಲೈಂಗಿಕ ಹಿಂಸೆಯ ಪ್ರಮಾಣ ತೀವ್ರಗತಿಯಲ್ಲಿ ಹೆಚ್ಚುತ್ತಿದೆ. ದೇಶದ ಉನ್ನತ ಸಂಸ್ಥೆಗಳೆನ್ನಿಸುವ ಸಿ.ಬಿ.ಐ.ಯಂತಹ ಸಂಸ್ಥೆಗಳೇ ನಿಷ್ಪಕ್ಷಪಾತವಾಗಿ ವಿಚಾರಣೆ ನಡೆಸಿ ನ್ಯಾಯ ದೊರಕಿಸಿ ಕೊಡುವ ಬದಲು ಅಪರಾಧಿಗೆ ರಕ್ಷಣೆ ನೀಡುವುದಾದರೆ ಅಮಾಯಕ ಮುಗ್ಧ ಹೆಣ್ಣುಮಕ್ಕಳು ನ್ಯಾಯ ಕೇಳಲು ಸಾಧ್ಯವೆ? ಸಿ.ಬಿ.ಐ. ತನಿಖೆಯ ಉದ್ದೇಶವೇನು? ಸಿ.ಬಿ.ಐ. ತನಿಖೆಯನ್ನು ದೆಹಲಿ, ವಿಶ್ವ ವಿದ್ಯಾನಿಲಯದ ವಿದ್ಯಾರ್ಥಿ ಹಾಗೂ ಪ್ರಾಧ್ಯಾಪಕರು ಜಂಟಿಯಾಗಿ ಖಂಡಿಸಿದ್ದಾರೆ ●

# ಅಮ್ಮ

ಅಮ್ಮ.....
ನಾನು ಬೆಳೆದಂತೆ
ಹಿತವಾಗಿ ಬಗ್ಗಿಸಿದೆ
ಮಿತವಾಗಿ ಬೆಳೆಸಿದೆ
ಹೆಣ್ಣಾದ ನೀನು ನಾಲ್ಕರಲಿ ತಲೆ ಎತ್ತದೆ ನಡೆ ಎಂದೆ

ನನ್ನ ನಗುವನು
ಮಾರ್ಯಾದೆಯ
ಸೋಗಿಗೆ ಬಲಿಕೊಟ್ಟೆ
ನನ್ನ ಧೈರ್ಯವನು
ಮಾನ ಎಂಬ
ಹೋಮಕೆ ಅರ್ಪಿಸಿದೆ
ಹೆಣ್ಣಾದ ನಿನಗೆ ಭಯವಿರಲಿ ಎಂದೆ

ನನ್ನ ಸಾಹಸಗಳಿಗೆ ಅಸಹನೆಯ ತೋರಿ
ನನ್ನ ಕನಸುಗಳನ್ನು
ಸೂಚನೆ ಇಲ್ಲದೆ ಕರಗಿಸಿದೆ
ನನ್ನ ಉತ್ಸಾಹ, ಉಲ್ಲಾಸಕೆ
ಹಾಕಿದೆ ಚೌಕಟ್ಟನು
ಹೆಣ್ಣಾದ ನಿನಗೆ ಕಟ್ಟುಕಟ್ಟಲೆಗಳೆ ಭೂಷಣ ಎಂದೆ

ನನ್ನ ಕಾಲುಗಳನು
ಸಂಪ್ರದಾಯದ
ಸಂಕೋಲೆಗಳಿಂದ
ಭದ್ರವಾಗಿ ಬಂಧಿಸಿದೆ
ನಿನ್ನ ಕಾರ್ಯಕೆ ನೀನೆ ಮೆಚ್ಚಿ
ನಿನ್ನ ಬೆನ್ನ ನೀನೆ ತಟ್ಟಿದೆ
ಹೆಣ್ಣಾದ ನೀನು ಕಷ್ಟ ಕೋಟಲೆಗಳಿಗೆ ಸಿದ್ಧವಾಗು ಎಂದೆ

ಹೆಣ್ಣೆಂದರೆ ಹೀಗೆ
ಇರಬೇಕೆಂದೆ
ರಕ್ತ, ಮೂಳೆ, ಮಾಂಸ
ತುಂಬಿದ
ಕೀಲು ಗೊಂಬೆಯನ್ನಾಗಿ
ಅಣಿ ಮಾಡಿ ಸುಖಿಸಿದೆ,
ಹೇಳು,
ನಿನ್ನ ಈ ಸಾಧನೆಗೆ
ತೊಡಿಸಿದರೆ ಮುತ್ತಿನ ಮುಕುಟವನ್ನು?
ಹೊದಿಸಿದರೆ ಜರತಾರಿಯ ಶಾಲನ್ನು?
ನನ್ನ ನೀ 'ಹೆಣ್ಣಾಗಿಸಿದ' ಪರಿಗೆ,
ಮುನ್ನಡೆಯಲು ತಿಳಿಯದೆ
ಹಿಂದಕೆ ಹೆಜ್ಜೆ ಇಡಲಾಗದೆ
ಈಗ ತಬ್ಬಿಬ್ಬಾಗಿರುವೆ
ಬದುಕಲರಿವಿಲ್ಲದೆ.

ಜಿ. ವಿ. ವೇದವಲ್ಲಿ

## ಸಚಿವರ ದುರ್ವರ್ತನೆಗೆ ದಿಟ್ಟ ಉತ್ತರ!

"ನಾನು ನಡೆಸಿದ ಹೋರಾಟ ಒಂದು ನೈತಿಕ ಯುದ್ಧ, ಎರಡು ವ್ಯಕ್ತಿಗಳ ನಡುವಿನ ವೈಯಕ್ತಿಕ ಯುದ್ಧವಲ್ಲ, ಇದು ನನ್ನೊಬ್ಬಳ ಸಮಸ್ಯೆಯಲ್ಲ, ಎಲ್ಲಾ ಮಹಿಳೆಯರ ಸಮಸ್ಯೆ", ಹೀಗೆಂದವರು, ಕೇರಳದ ಸಾರಿಗೆ ಕಾರ್ಯದರ್ಶಿ ನಳಿನಿ ನೆಟ್ಟೋ. ಸಾರಿಗೆ ಸಚಿವ ನೀಲಲೋಹಿತ ಅವರು, ಕಛೇರಿ ವಿಷಯ ಚರ್ಚಿಸಲು ಹೋದಾಗ ತಮ್ಮೊಂದಿಗೆ ಅನುಚಿತವಾಗಿ ವರ್ತಿಸಿದರೆಂದು, ಮುಖ್ಯಮಂತ್ರಿಗಳಿಗೆ ನಳಿನಿಯವರು ದೂರು ಸಲ್ಲಿಸಿದ್ದರು. ಸಚಿವ ಸಂಪುಟದಲ್ಲಿ ವಿಷಯ ಕುರಿತು ಚರ್ಚೆ ನಡೆಸಿದ ಬಳಿಕ ಸಚಿವರು ರಾಜೀನಾಮೆ ನೀಡಲೇ ಬೇಕಾಯಿತು. ರಾಜೀನಾಮೆ ನೀಡಿದ ನಂತರ ಸಚಿವರು, ನಳಿನಿಯವರ ಮೇಲೆ ಇಲ್ಲಸಲ್ಲದ ಗೂಬೆ ಕೂಡಿಸುತ್ತಿದ್ದ ಸಮಯದಲ್ಲಿ ಮತ್ತೊಬ್ಬ ಅರಣ್ಯಾಧಿಕಾರಿ ಪ್ರಕೃತಿ ಶ್ರೀವಾಸ್ತವ ಅವರು ತನ್ನ ಜೊತೆಯಲ್ಲೂ ಸಚಿವ ಹಿಂದೆ ಇದೇ ರೀತಿ ವರ್ತಿಸಿದ್ದರೆಂಬ ಹೇಳಿಕೆ ನೀಡಿರುವುದು, ಸಮಂಜಸವಾಗಿದೆ. ಸಚಿವರ ವರ್ತನೆಗೆ ನಳಿನಿಯವರು ದಿಟ್ಟ ಉತ್ತರ ನೀಡಿದ್ದಾರೆ.

# ಪುಸ್ತಕ ಪರಿಚಯ

ಅಣುಬಾಂಬ್ ಹೆಸರಿನಲ್ಲಿ ದೇಶಪ್ರೇಮ ಮೆರೆಯುತ್ತಿರುವುದನ್ನು ಮಾನವೀಯ ಜನ ವಿರೋಧಿಸಲೇಬೇಕು. ಅಣುವೆಂಬ ಕಣ ಕೆಣಕಿದರೆ ಅದು ಜೀವಕುಲವನ್ನೆ ಹೆಣವಾಗಿಸುವ ದೈತ್ಯಶಕ್ತಿ ಪಡೆದುಕೊಳ್ಳುವುದರಲ್ಲಿ ಅನುಮಾನವೇ ಇಲ್ಲ. ಜಗತ್ತಿನಾದ್ಯಂತ ಅಣುಶಕ್ತಿಯನ್ನು ಬಳಸಿಕೊಂಡಿರುವುದು ಯುದ್ಧಾಸ್ತ್ರಗಳನ್ನು ತಯಾರಿಸಲು. ಆರೋಗ್ಯ, ವಿದ್ಯುತ್‌ಗಾಗಿ ಬಳಕೆಯಾಗಿರುವುದು ತುಂಬಾ ಕಡಿಮೆ. ಪ್ರತಿಷ್ಠೆಯ ತೆವಲಿಗೆ ಜೀವಕೋಟಿಯನ್ನೆ ಬಲಿಕೊಡಲು ಸಿದ್ಧರಾದ ದುರುಳರು ಭದ್ರತೆ, ರಾಷ್ಟ್ರಪ್ರೇಮದ ಹೆಸರಿನಲ್ಲಿ ಜನತೆಯ ಕಣ್ಣಿಗೆ ಮಣ್ಣೆರೆಚುತ್ತಿದ್ದಾರೆ. ಆದರೆ ಅಣುಶಕ್ತಿಯಿಂದ ಈಗಾಗಲೆ ಆಗಿರುವ ಅವಾಹುತಗಳು ಮುಚ್ಚಿಡಲು ಸಾಧ್ಯವೇ ಇಲ್ಲದಂತಹ ರಾಕ್ಷಸರೂಪ ಪಡೆದುಕೊಂಡಿವೆ. ಈ ಅಣುವೆಂಬುದು ಏನು? ಸಣ್ಣ ಕಣವೊಂದು ಬಾಂಬ್‌ನ ರೂಪ ಪಡೆದು ದುರುಳರ ಆಟಿಕೆಯಾಗಿ ಸಿಡಿದು ಜೀವಕುಲವನ್ನೆ ಹೆಣವಾಗಿಸಿ, ಜೀವ ಚಿಗುರುವುದನ್ನೆ ನಿಲ್ಲಿಸಿಬಿಡುವವರೆಗಿನ ಪ್ರಕ್ರಿಯೆಯಲ್ಲಿ ಬರುವ ಅಣುಸ್ಥಾವರಗಳು, ವಿಕಿರಣದ ಅನಾಹುತಗಳು, ಅಣುಶಕ್ತಿ ಹಿಂದಿನ ಅಧಿಕಾರ ರಾಜಕೀಯ, ಅಣುಶಕ್ತಿಗಾಗಿ ಮಾಡಿರುವ ದುಂದುವೆಚ್ಚ - ಇವೆಲ್ಲವನ್ನು ಕನ್ನಡದಲ್ಲಿ ಸರಳವಾಗಿ, ಸಂಕ್ಷಿಪ್ತವಾಗಿ "ಅಣುವೆಂಬ ಸದ್ದಿಲ್ಲದ ಸಾವ ಕುರಿತು...." ಎಂಬ ಪುಸ್ತಕ ರೂಪದಲ್ಲಿ ಜಗದೀಶ್ ಕೊಪ್ಪ ಅವರು ಹೊರತಂದಿದ್ದಾರೆ. ಬಹುಮುಖ್ಯ ಅಂಕಿ ಅಂಶಗಳಲ್ಲದೆ ಸೂಕ್ತ ಛಾಯಚಿತ್ರಗಳನ್ನು ಪುಸ್ತಕದಲ್ಲಿ ಬಳಸಿಕೊಳ್ಳಲಾಗಿದೆ. ದೇಶಪ್ರೇಮವೆಂದು ಗುಡುಗುತ್ತಿರುವ ಕೇಸರಿಗಳ ನಿಜವಾದ ಬಾಂಬ್ ಪುರಾಣವನ್ನು ತಿಳಿಯಲು ಓದಲೇಬೇಕಾದ ಪುಸ್ತಕ. ಮಾನಸ ಓದುಗರಿಗಾಗಿ ಪುಸ್ತಕದ ಒಂದು ಭಾಗವನ್ನು ಪ್ರಕಟಿಸಿದ್ದೇವೆ.

## ಅಣುಸ್ಥಾವರಗಳ ಮತ್ತೊಂದು ಮುಖ

ಜಗತ್ತಿನ ಎಲ್ಲಾ ದೇಶಗಳಲ್ಲೂ ಇರುವ ಅಣುಸ್ಥಾವರಗಳು ಮೇಲ್ನೋಟಕ್ಕೆ ವಿದ್ಯುತ್ ತಯಾರಿಕಾ ಘಟಕಗಳಾಗಿದ್ದರೂ, ಅಲ್ಲಿರುವ ಒಂದು ಅಥವಾ ಎರಡು ಘಟಕಗಳು, ಅಲ್ಲಿನ ದೇಶಗಳ ಬಾಂಬ್ ತಯಾರಿಕೆಗಾಗಿ, ಯುರೇನಿಯಂ ಸಂಸ್ಕರಣ ಮತ್ತು ಪ್ಲುಟೋನಿಯಂ ತಯಾರಿಕೆಯಲ್ಲಿ ತೊಡಗಿರುವುದು ಎಲ್ಲಾ ಕಡೆ ಕಂಡು ಬರುತ್ತಿದೆ.

ಭಾರತದಲ್ಲಿರುವ ಬಹುತೇಕ ಅಣ್ವಸ್ತ್ರ ಬಾಂಬ್‌ಗಳು, ಪ್ಲುಟೋನಿಯಂ ಆಧಾರಿತ ಬಾಂಬ್‌ಗಳು, ಇದಕ್ಕಾಗಿ ಬಾಂಬೆ ಬಳಿಯ ಬಾಬಾ ಅಣು ರಿಯಾಕ್ಟರ್ ಕೇಂದ್ರದಲ್ಲಿ ಪ್ಲುಟೋನಿಯಂ ತಯಾರಿಕಾ ಘಟಕವಿದೆ.

ಪಾಕಿಸ್ತಾನದ ಬಾಂಬುಗಳು ನೇರ ಯುರೇನಿಯಂ ಆಧಾರಿತ ಬಾಂಬ್‌ಗಳಾಗಿದ್ದು ಅಲ್ಲಿನ ಅಣುಸ್ಥಾವರಗಳಲ್ಲಿ ಯುರೇನಿಯಂ ಸಂಸ್ಕರಿಸುವ ಕ್ರಿಯೆ ನಡೆದಿದೆ. ಆದರೆ ಇವೆಲ್ಲವನ್ನು ದೇಶದ ರಕ್ಷಣೆಯ ನೆಪದಲ್ಲಿ ಸಾರ್ವಜನಿಕರಿಗೆ ಮಾಹಿತಿ ಸಿಗದಂತೆ ಗೌಪ್ಯವಾಗಿರಿಸಲಾಗಿದೆ.

ದುರಂತವೆಂದರೆ, ಜಗತ್ತಿನಲ್ಲಿ ಸ್ಥಾಪಿತವಾಗಿರುವ, ಸ್ಥಾಪನೆಯಾಗುತ್ತಿರುವ ಯಾವುದೇ ಅಣುಸ್ಥಾವರದ ಅವಧಿ 20ರಿಂದ 30 ವರ್ಷ ಮಾತ್ರ. ಇಲ್ಲಿನ ಯಂತ್ರಗಳು, ಕಟ್ಟಡಗಳು, ಮಿತಿ ಮೀರಿದ ಶಾಖ ಮತ್ತು ಅಣು ವಿಕಿರಣಗಳ ಪ್ರಭಾವದಿಂದ ಈವರೆಗೆ 20 ವರ್ಷ ಆಯಸ್ಸು ಕಂಡಿರುವ ಸ್ಥಾವರಗಳೇ ಇಲ್ಲ. ಈ ಸ್ಥಾವರಗಳು ತಮ್ಮ ಜೀವಿತ ಅವಧಿಯಲ್ಲಿ ಉತ್ಪಾದಿಸುವ ವಿದ್ಯುತ್‌ಗಿಂತ ಅವುಗಳು ಹೊರ ಹಾಕುತ್ತಿರುವ ತ್ಯಾಜ್ಯ ವಸ್ತು ಮತ್ತು ವಿಕಿರಣಶೀಲ ಕೊಳಚೆ ಇಂದು ಜಗತ್ತಿಗೆ ಸಮಸ್ಯೆಯಾಗಿದೆ.

ಒಂದು ಮಧ್ಯಮ ವರ್ಗದ ಅಣುಸ್ಥಾವರ ತನ್ನ ಬಳಕೆಯ ಅವಧಿಯಲ್ಲಿ ಅದು 18 ಸಾವಿರ ಘನ ಮೀಟರ್ ಕೊಳಚೆಯನ್ನ ಹೊರ ಚೆಲ್ಲುತ್ತದೆ. ಅಂದರೆ, ಅದನ್ನ ಒಂದು ಪುಟ್‌ಬಾಲ್ ಮೈದಾನದ ತುಂಬಾ 12 ಅಡಿ ಎತ್ತರಕ್ಕೆ ಹರಡಬಹುದು. ಇದರ ದೊಡ್ಡ ಸಮಸ್ಯೆಯೆಂದತೆ, ಇದನ್ನ ವಾತಾವರಣದಲ್ಲಿ ನೇರವಾಗಿ ಹಾಕುವಂತಿಲ್ಲ. ಭೂಮಿಯಲ್ಲಿ ಹೂತು ಹಾಕಿ ಸುಮ್ಮನಿರುವಂತಿಲ್ಲ. ಭೂಮಿಯಲ್ಲಿ ಈ ಕೊಳಚೆಯನ್ನು ಹೂತು ಹಾಕಿದರೂ, ನಿರಂತರವಾಗಿ 25 ವರ್ಷದಿಂದ 50 ವರ್ಷದವರೆಗೂ ನೀರುಣಿಸಿ ತಣಿಸುತ್ತಾ ಇರಬೇಕು. ಇಲ್ಲದಿದ್ದರೆ, ಇದು ಒಂದು ಬಾಂಬಿನ ರೂಪ ತಾಳಿ ತನ್ನ ರೌದ್ರಾವತಾರ ತೋರಬಹುದು. ಈಗ ಇದೇ ಎಲ್ಲಾ ದೇಶಗಳ ದೊಡ್ಡ ತಲೆ ನೋವಾಗಿರುವುದು, ಬಗೆಹರಿಯದ ಸಮಸ್ಯೆಯಾಗಿರುವುದು. ಅಮೇರಿಕಾ ದೇಶವೊಂದೇ ಕಳೆದ 50 ವರ್ಷಗಳಿಂದ ಐದು ವಿವಿಧ ಪ್ರಯೋಗಗಳನ್ನು ಮಾಡಿ, ಎಲ್ಲದರಲ್ಲೂ ವಿಫಲವಾಗಿ ಕೈ ಚೆಲ್ಲಿ ಕುಳಿತಿದೆ. ಕ್ಯಾನ್ಸಸ್ ರಾಜ್ಯದ ಲಯೋನ್ಸ್ ಎಂಬ ಸ್ಥಳದಲ್ಲಿ ಉಪ್ಪಿನ ಗಣಿಗಳ ನಡುವೆ 300ರಿಂದ 1200 ಮೀಟರ್ ಆಳಕ್ಕೆ ಕಂದಕ ಕೊರೆದು, ಈ ತ್ಯಾಜ್ಯ ವಸ್ತುವನ್ನು ಹೂಳುತ್ತಿದ್ದಾಗಲೇ ಭೀಕರ ಭೂಕಂಪವಾಗಿ ಆ

ಯೋಜನೆಯನ್ನು ಅಲ್ಲಿಗೆ ಕೈ ಬಿಡಲಾಯಿತು. ಈಗ ನೆವಡ ರಾಜ್ಯದ ಯುಕ್ಕಾ ಪರ್ವತದ ತಪ್ಪಲಿನಲ್ಲಿ ಹೂಳುವ ಯೋಜನೆ ಹಾಕಿದ್ದು, ಈ ಯೋಜನೆ ಬಗ್ಗೆ ಅಲ್ಲಿನ ರಾಜ್ಯದ ಗೌರ್ನರ್ ಮತ್ತು ನಾಗರೀಕರಿಂದ ತೀವ್ರ ಪ್ರತಿಭಟನೆ ಎದುರಾಗಿದೆ. ರಷ್ಯಾ ದೇಶ ಕೂಡ ಆಳ ಸಮುದ್ರದ ಬಂಡೆಯ ನಡುವೆ ಕಂದಕ ಕೊರೆದು, ತ್ಯಾಜ್ಯವನ್ನು ಹೂತು ಹಾಕುವ ಪ್ರಯತ್ನ ನಡೆಸಿತ್ತು. ಆದರೆ ಕೊಳಚೆಯನ್ನು ಹೂತು ಹಾಕಿದ ಕೆಲವೇ ದಿನಗಳಲ್ಲಿ ಅಲ್ಲಿನ ಜಲಚರಗಳು ತೀವ ವಿಕಿರಣಗಳಿಂದ ಸಾವನಪ್ಪಿದ್ದು ಕಂಡು ಬಂದು, ಅಲ್ಲಿಗೆ ನಿಲ್ಲಿಸಲಾಗಿದೆ. ಈಗ ಎಲ್ಲಾ ದೇಶಗಳಲ್ಲಿ ಆಯಾ ಅಣುಸ್ಥಾವರದ ಆವರಣದಲ್ಲಿ ಗುಂಡಿ ತೋಡಿ, ಕಾಂಕ್ರಿಟ್ ತೊಟ್ಟಿಗಳಲ್ಲಿ, ಉಕ್ಕಿನ ಕಡಾಯಗಳಲ್ಲಿ ಇದನ್ನು ಶೇಖರಿಸಿಟ್ಟು ಅತ್ಯಂತ ಜತನದಿಂದ ಕಾಪಾಡಲಾಗುತ್ತಿದೆ. ಇದೊಂದು ರೀತಿ ಮಡಿಲಿಗೆ ಕಟ್ಟಿಕೊಂಡ ಕೆಂಡದಂತೆ ಆಗಿದೆ.

ಭಾರತದ ವಿಜ್ಞಾನಿ ಡಾ. ಹೆಚ್. ಎನ್. ಸೇಥ್ನಾ ಇವರು ಭಾರತದಲ್ಲಿ 2000ನೇ ಇಸವಿ ವೇಳೆಗೆ ಶೇಖರವಾಗುವ ವಿಕಿರಣಶೀಲ ಕೊಳಚೆ ವಸ್ತುಗಳ ಪ್ರಮಾಣ ಈ ಕೆಳಗಿನಷ್ಟು ಶೇಖರವಾಗುತ್ತದೆ ಎಂದು ಅಂದಾಜು ಮಾಡಿದ್ದಾರೆ.

| | |
|---|---|
| 1. ಸಾಧಾರಣ ಗಟ್ಟಿ ಕೊಳಚೆ | 1 ಲಕ್ಷದ 7 ಸಾವಿರ ಘನ ಮೀಟರ್ |
| 2. ಕೆಳ ದರ್ಜೆ ವಿಕಿರಣ ಕೊಳಚೆ | 71 ಸಾವಿರ ಘನ ಮೀಟರ್ |
| 3. ಮಧ್ಯಮದ ಕೊಳಚೆ | 10,900 ಘನ ಮೀಟರ್ |
| 4. ಉಚ್ಚ ದರ್ಜೆಯ ಕೊಳಚೆ | 8 ಸಾವಿರ ಘನ ಮೀಟರ್ ನಷ್ಟು. |

ಭಾರತದಲ್ಲಿ ಈಗ ಈ ಕೊಳಚೆಯನ್ನು ಕೋಲಾರದ ಸಮೀಪದ ಕೆ.ಜಿ.ಎಫ್‌ನ ಚಿನ್ನದ ಗಣಿಯ ಆಳದಲ್ಲಿ ಹುದುಗಿಸಲು ಯೋಚಿಸಲಾಗುತ್ತಿದೆ. ಒಂದು ವೇಳೆ ಈ ಕೆಲಸ ನಡೆದರೆ, ಇನ್ನು ಮುಂದೆ ಕೋಲಾರ ಜಿಲ್ಲೆಯ ಪ್ರದೇಶವನ್ನು, ಅಲ್ಲಿನ ಜನ-ಜೀವನ, ಜಾನುವಾರುಗಳ ಬದುಕನ್ನ, ಭೂಪಟ ನೋಡಿ, ಇತಿಹಾಸ ಓದಿ ತಿಳಿದುಕೊಳ್ಳಬೇಕಾಗುತ್ತದೆ. ಇದು ಗಣೇಶನನ್ನ ಮಾಡಲು ಹೊರಟು ಅವರಪ್ಪನ್ನ ನಿರ್ಮಿಸುವ ಕೆಲಸವಾಗುತ್ತಿದೆ ಅಷ್ಟೆ.

**ಜಗತ್ತಿಗೆ ದುಬಾರಿಯಾಗಿರುವ ಕೊಳಚೆ ವಿಲೇವಾರಿ**

ಈವರೆಗೆ ಅಣು ಸ್ಥಾವರಕ್ಕೆ ಮುಗಿ ಬಿದ್ದು, ಇವುಗಳನ್ನು ಸ್ಥಾಪಿಸಿದ ದೇಶಗಳೆಲ್ಲಾ ಈ ಸ್ಥಾವರಗಳಿಗೆ ಹೂಡಿದ ಹಣ ಮತ್ತು ಉತ್ಪಾದನೆಯಾಗುವ ವಿದ್ಯುತ್ ಮುಖಾಂತರ ವಾಪಸ್ ಪಡೆದ ಬಂಡವಾಳ ಇವುಗಳ ಲೆಕ್ಕಾಚಾರದಲ್ಲಿ ಮುಳುಗಿದ್ದವೇ ಹೊರತು, ಅಣು ಸ್ಥಾವರಗಳಿಂದ ಹೊರ ಬೀಳುತ್ತಿರುವ ಕೊಳಚೆ ವಿಲೇವಾರಿಗಾಗಿ ಆಗುತ್ತಿರುವ ಖರ್ಚಿನ ಬಗ್ಗೆ ಯಾರು ತಲೆ ಕೆಡಿಸಿಕೊಂಡಿರಲಿಲ್ಲ. ಈಗ ಪ್ರತಿಯೊಂದು ವಿದ್ಯುತ್ ಅಣುಸ್ಥಾವರವೂ ಆಯಾ ದೇಶಕ್ಕೆ ತಲೆಗಿಂತ ತರಡು ಬೀಜವೇ ಭಾರ ಎನ್ನುವಂತಾಗಿದೆ.

ಅಮೇರಿಕಾದ ಅಣುಶಕ್ತಿ ಇಲಾಖೆ 1988ರಲ್ಲಿ ಕೊಳಚೆ ವಿಲೇವಾರಿಗಾಗಿ ಮಾಡಿದ ಒಟ್ಟು ಖರ್ಚು 4 ಲಕ್ಷದ 50 ಸಾವಿರ ಕೋಟಿ ಡಾಲರ್ (ಅಂದರೆ 180 ಲಕ್ಷ ಕೋಟಿ ರೂ.ಗಳು).

ಇದಷ್ಟೇ ಅಲ್ಲ. ಅಮೇರಿಕಾ ದೇಶ 1940ರಿಂದ 1996ರವರೆಗೆ ಒಟ್ಟು ಅಣುಬಾಂಬ್, ಅಣು ವಿದ್ಯುತ್ ಹಾಗೂ ಪರೀಕ್ಷೆ, ಕೊಳಚೆ ವಿಲೇವಾರಿ ಹೀಗೆ ಈ ಅಣು ಸಂಬಂಧಿ ಕಾರ್ಯಕ್ಕಾಗಿ ಒಟ್ಟು ಖರ್ಚು ಮಾಡಿರುವ ಹಣ 5.5 ಬಿಲಿಯನ್ ಡಾಲರ್‌ಗಳು (1 ಸಾವಿರ ಕೋಟಿಗೆ 1 ಬಿಲಿಯನ್) 1 ಡಾಲರ್‌ನ ಬೆಲೆ ಆರತದ 43 ರೂಪಾಯಿಗೆ ಸಮ). ಅಂದರೆ ಈ ಹಣವನ್ನು ಡಾಲರ್‌ನ ನೋಟುಗಳನ್ನು ಚಂದರ ಮುಂದೆ ಒಂದು ಹೀಗೆ ಜೋಡಿಸುತ್ತಾ ಹೋದರೆ, ಭೂಮಿಯಿಂದ 4 ಲಕ್ಷ 59 ಸಾವಿರ ಮೈಲು ದೂರದಲ್ಲಿರುವ ಚಂದ್ರನ ಬಳಿ ಸುತ್ತಿ ಮತ್ತೆ ಭೂಮಿಗೆ ಬರಬಹುದಂತೆ. ಈ ಮಾತು ಹೇಳಿದವರು, ಅಮೇರಿಕಾದ ಒಟ್ಟು ಖರ್ಚುಗಳನ್ನು ಲೆಕ್ಕ ಹಾಕಲು ಯೋಜಿಸಿದ್ದ ಅಮೇರಿಕಾದ ಪ್ರತಿಷ್ಠಿತ ಸಂಸ್ಥೆ ಬ್ರೂಕಿಂಗ್ ಇನ್‌ಸ್ಟ್ಯೂಟ್‌ನ ಪ್ರೆಸ್‌ನ ನಿರ್ದೇಶಕರು.

ಅಮೇರಿಕಾದಂತಹ ಮುಂದುವರಿದ ಅತ್ಯಂತ ಶ್ರೀಮಂತ ರಾಷ್ಟ್ರಕ್ಕೆ ಇದು ಈ ರೀತಿ ಹೊರೆಯಾಗಬೇಕಾದರೆ, ಇನ್ನು ಹಿಂದುಳಿದ ರಾಷ್ಟ್ರಗಳ ಗತಿ ಏನು?

ಅದಕ್ಕಾಗಿ ಒಂದು, ಅಮೇರಿಕಾ, ಸ್ವೀಡನ್, ನಾರ್ವೆ, ಡೆನ್ಮಾರ್ಕ್, ಬೆಲ್ಜಿಯಂ, ಫಿನ್ಲೆಂಡ್, ಯುಗೊಸ್ಲೋವಿಯಾ, ಇಟಲಿ, ಬ್ರಿಟನ್, ಜರ್ಮನಿ, ಆಸ್ಟ್ರೇಲಿಯಾ, ಫಿಲಿಫೈನ್, ಬ್ರೆಜಿಲ್, ರಷ್ಯಾ ದೇಶಗಳು ಅಣುಸ್ಥಾವರಗಳನ್ನ ಮುಚ್ಚಿ ಕೈ ತೊಳೆದುಕೊಳ್ಳುತ್ತಿವೆ. ಆದರೆ ಭಾರತದಂತಹ ಬಡ ದೇಶಕ್ಕೆ ಈ ವ್ಯಾಮೋಹ ನಿಂತಿಲ್ಲ. ದುರಂತವೆಂದರೆ, ನಮ್ಮನ್ನಾಳುವ ಪಾರ್ಲಿಮೆಂಟ್ ಹೊಸ್ತಿಲು ತುಳಿದ ಎಷ್ಟು ಮಂದಿಗೆ, ಈ ನೆಲ, ಈ ಜಲ, ಈ ನಾಡಿನ ಮಕ್ಕಳ ಬಗ್ಗೆ ಇಲ್ಲಿರುವ ಮರ-ಕಾಡು-ನಾಡಿನ ಬಗ್ಗೆ ಮಾಹಿತಿ ಗೊತ್ತಿದೆ? ಕ್ರಿಮಿನಲ್‌ಗಳ, ಕೊಲೆಗಾರರ, ತಲೆ ಹಿಡುಕರ, ಧರ್ಮ ಮತ್ತು ಜಾತಿ ಹೆಸರಿನಲ್ಲಿ ಬದುಕಿರುವವರ ಆವಾಸ ಸ್ಥಾನವಾಗಿರುವ ಭಾರತದ ಪಾರ್ಲಿಮೆಂಟ್‌ನಲ್ಲಿ ಇವರಿಂದ ಈ ದೇಶದ ಭವಿಷ್ಯದ ಬಗ್ಗೆ ಏನನ್ನು ತಾನೆ ನಿರೀಕ್ಷಿಸಬಹುದು?

*ಲೇ.* - ಜಗದೀಶ್ ಕೊಪ್ಪ, *ಪ್ರಕಾಶಕರು* - ಲೋಹಿಯಾ ಪ್ರಕಾಶನ, 'ಕ್ಷಿತಿಜ', ಕಪ್ಪಗಲ್ಲು ರಸ್ತೆ, ಗಾಂಧಿನಗರ, ಬಳ್ಳಾರಿ - 583 103

ಬೆಲೆ : ರೂ. 25

# ಈ ದೇಶ ಎಷ್ಟೊಂದು ಚೆನ್ನ?

*ಕವಿ ಇಕ್ಬಾಲ್ ಅವರ ಕ್ಷಮೆ ಕೋರಿ*

**[ಸಾರೇ ಜಹಾಸೇ ಅಚ್ಚಾ ರಾಗದಲ್ಲಿ ಹಾಡಿಕೊಳ್ಳಬೇಕು]**

ಈ ದೇಶ ಎಷ್ಟೊಂದು ಚೆನ್ನ
ಯಾಕಂದ್ರೆ ತಿನ್ನೋಕೆ ಕೂಳಿಲ್ಲ ಇಲ್ಲ ||ಪ||

ಮುಸ್ಲಿಂ, ಸಿಖ್, ಕ್ರಿಶ್ಚಿಯನ್ ಇದ್ದರು
ಹಿಂದು ರಾಜ್ಯ ಸ್ವರಾಜ್ಯ ||ಪ||

ಗಡಿಯಲ್ಲಿ ಯುವಕರನ್ನು ಬಲಿ ನೀಡಿ ಶೂರರಾಗಿ
ದಿಕ್ಕಿಲ್ಲದವರ ನೋವ ಮರೆಸಿ
ಹಾಡ್ತೀವಿ ದೇಶ ಪ್ರೇಮ, ಸ್ವಪ್ರೇಮ ||ಪ||

ಉದ್ಯೋಗ ನೀರೂ ಇಲ್ಲ
ಆಸ್ಪತ್ರೆ ದೀಪ ಇಲ್ಲ
ಲಂಚಾವತಾರ ಎಲ್ಲಾ
ನಮ್ಮೀ ನಾಡ ಹಿರಿಮೆ ಗರಿಮೆ ||ಪ||

ಹೈಟೆಕ್ಕು ಎಲ್ಲಾ ನಮ್ಮದೆ
ರಟ್ಟೆಳ್ಳಿ, ಕೈಗ ನಮದೆ
ಗುಳೆ ಹೋಗೊ ಜನರ ನೋವು
ಹಾಹಾಕಾರ ನಮದೆ, ನಮದೆ ||ಪ||

ರಾಷ್ಟ್ರದ ಪ್ರಗತಿ ಮುಖ್ಯ
ನೊಂದೋರ ಅಳಲು ಎತ್ತ
ಸಾಯೋದು ಏನು ಚೆಂದ
ಬದುಕಿದ್ದು ಸಾಯೋದು ಅಂದ ಬಲಂದ ||ಪ||

*(ಜನವರಿ **26**ರ ಆಚರಣೆಯಂದು ಮಾನಸ ಬಳಗದವರು ರಚಿಸಿ ಹಾಡಿದ ಹಾಡು.)*

ಮಾನಸ ಪತ್ರಿಕೆ ಯಾವ ಸಂಸ್ಥೆಯ, ಸರ್ಕಾರದ ನೆರವಿಲ್ಲದೇ ಪ್ರಕಟವಾಗುತ್ತಿರುವ ಮಹಿಳೆಯರೇ ನಡೆಸುತ್ತಿರುವ ಸ್ವಾಯತ್ತ ಪತ್ರಿಕೆ. ಓದುಗರು ಹಾಗೂ ಸಹೃದಯರು ನೀಡುವ ಆರ್ಥಿಕ ನೆರವೇ ಪತ್ರಿಕೆಯ ಜೀವಾಳ. ಚಂದಾದಾರರಿಗೆ ಚಂದಾ ಅವಧಿ ಮುಕ್ತಾಯವಾದುದರ ಬಗ್ಗೆ ಸೂಚನೆಯನ್ನು ನೀಡಲಾಗುತ್ತದೆ. ಓದುಗರು ತಕ್ಷಣ ಚಂದಾ ನವೀಕರಿಸಬೇಕೆಂದು ಕೋರುತ್ತೇವೆ. ಪತ್ರಿಕೆಯು ಉಳಿದು ಬೆಳೆಯಬೇಕಾದರೆ ಓದುಗರ ಸಹಕಾರ ಅತ್ಯಗತ್ಯ.

**ವಾರ್ಷಿಕ ಚಂದಾ : 40 ರೂ.**

**ಸಂಸ್ಥೆಗಳಿಗೆ : 100 ರೂ**

*ಸಂ. ಮಂಡಳಿ*

REGD No. CPMG/KA/BGE/289/2000

BOOK-POST
PRINTED MATTER




H.S. Pushpa
No. 95. Y.V. Annaiah Rd
Yelachenahalli
J.P. Nagar post
Bangalore - 78

ವಿಳಾಸ :
**ಮಾನಸ**
ಪಂಚಾಯಿತಿ ರಸ್ತೆ
ಕಾಡುಗೋಡಿ
ಬೆಂಗಳೂರು - 560 067